ಹರಿಣಾಕ್ಷಿಗೆ [1]ಪದಪಂ ರಾ
ಗರತೋತ್ಸವಮುಮೆಯ್ದೆ[1] ನಡೆದಿಂಬಟಿಕಾ ।
ತುರನಾಗದೆ ಕೂಡಿದಾರ್
ದರಿಪುದು ಚದುರಂಗೆ ಬೇಱೆ ಕೋಡೆರಡೊಳವೇ ॥ ೧೨೨

(ಮದನತಿಲಕಂ, ೭-೮.)

ತವಕದಲವರೆಡೆಗಳ್ ಕಾ
ಣವು ಮುಂದಂ ಭೀತಿ ಬಟಿಕ ಪಲ್ಲವಿಸುತ್ತಿ ।
ರ್ಪುವು ಬೇಟದ ಕೂಟದ ಕೋ
ಟಿವಿಧದ ಕೋಟಲೆಗೆ ರೂಪು ಹಾದರಮಲ್ತೇ ॥ ೧೨೩

ಸಟಿಕನೆ ಸೀತಡೆ ಪೆಱರಂ
ಜಱಿದಡೆ ಕೆಮ್ಮಿದಡೆ ಕಯ್ಯ ವೀಳೆಯದೆಲೆಯುಂ ।
ಹಱಿದಡೆ ಬಾಗಿಲ ದಿಕ್ಕಂ
ಮುಱಿದಡೆ ಕುಱುಪಿಂಗೆ ಪಾಣ್ಬರೆಸೆವರ್ ತಮ್ಮೊಳ್ ॥ ೧೨೪

ನೆರೆಯಲೆಡೆ ಪೊಟ್ಟು ದೂತರ್
ದೊರೆಕೊಳ್ಳದೊಡಂಗನಾಜನಂ ಶುಚಿಯಲ್ಲದೆ ।
ನೆರೆಯಲೆಡೆ ಪೊಟ್ಟು ದೂತರ್
ದೊರೆಕೊಂಡಡೆ ಶುಚಿಗಳುಂಟೆ ಪೆಂಡಿರ್ ಜಗದೊಳ್ ॥ ೧೨೫

ಎಸೆವ ಬಸಂತಮಾಸಮಿದಿರೇಱುವ ಜವ್ವನಮೂರಮಿಂಡರು
ಬ್ಬಸದ ವಿಳಾಸಿಗಳ್ ಮನೆಯ ಗಂಡನವಂ ಪ[2]ಗೆ[2]ಗಂಡನೆತ್ತಲುಂ ।
ಪೊಸಬನಪಿಂಬು ಕುಪ್ಪಿಗೆಯ ಕಳ್ ಮನೆಯೊಳ್ ಪಿರಿದುಂಟು ತೋಂಟ ಕ
[3]ಣ್ಕಿ[3]ಸುರರ ಮಾತು ನೀತಿ ಗಡ ಹಾದರವಾಡದೆ ಸಾವಳೇ ಮಗಳ್ ॥ ೧೨೬

ಒಡೆಯರ ಕಾಪು ಕಟ್ಟಣಕಮೆಂದೊಡೆ ಬಂಧುಗಳಾಪ್ತರಾಗದೆಂ
ದೊಡೆ [4]ಮನ[4]ಮಿತ್ತಲೀಯಳವಳೆಂದೊಡಸಾಧ್ಯಮದೆಂದೊಡೊಲ್ಲಳೆಂ ।
ದೊಡೆ ಮೊಱೆಯಾಗದೆಂದೊಡೆ ಪರಾಂಗನೆಯೆಂದೊಡೆ ಸಾಮ್ಯವಲ್ಲವೆಂ
ದೊಡೆ ತಲೆಪೋಗೆಯುಂ ಬಸಿದು ಬೀೞದೆ ಸ್ವೈರಿಸರಲ್ತೆ ಕಾಮುಕರ್ ॥ ೧೨೭

(ಅನಂತನಾಥಪುರಾಣಂ, ೧೧-೩೩.)

---

[1] ಪರಪುರುಷಂಗೆ ರತೋತ್ಸಾಹಮನೆಯ್ದೆ (ಖ.ಬ). [2] ಜೆ (ಖ.ಬ). [3] ಣ್ಕೆ (ಕ). [4] ಯನಿ (ಖ.ಬ).

ವಧಮುಂ ಬಂಧನಮುಂ ಪರಾಭವಮುಮಂಗಚ್ಛೇದಮುಂ ಪೊರ್ದುಗುಂ
ವಿಧುವಿಖ್ಯಾತಿ [1]ಕಿ[1]ಲುಂಬುಗೊಳ್ಗುಮಪವಾದಾತೋದ್ಯನಾದಂ ದಿಶಾ ।
ವಧಿಯಂ ದಾಂಟುಗುಮನ್ಯಜನ್ಮದೊಳಮಕ್ಕುಂ ದುರ್ಗತಿಕ್ಲೇಶಮುಂ
ದಧಿರಾಜರ್ ಕೆಲರಾಲಿಸರ್ ಮಱೆದುಮನ್ಯಪ್ರೇಯಸೀವಾರ್ತೆಯಂ ॥ ೧೨೮

(ಪಂಪರಾಮಾಯಣಂ, ೧೨-೫೯.)

ರಾವಣನುಂ ಗಡ ಸೀತಾ
ದೇವಿಗೆ ಸೋಲ್ತುದಱ ಫಲಮನೈದಿದ[2]ನುಟಿದರ್[2] ।
ರಾವಣನಿಂದಧಿಕ[2]ರೆ[2] ಪೇ
[4]ಪೇ[4]ವುದೊ ಶುಚಿಯಿಲ್ಲದವನ ಗಂಡುಂ ತೊಂಡುಂ ॥ ೧೨೯

(ಪಂಪಭಾರತಂ, ೮-೮೨.)

ಶತ[5]ಧೃತಿ[5]ಪೌತ್ರನುಂ ಜಿತಜಗತ್ತ್ರಯವೀರನುಮಾಗಿ [6]ನೀಂ[6] ಮಹಾ
ಸತಿಗವನೀಜೆಗನ್ಯವಧುಗಾಟಿಸ ವಾಸವ ವಹ್ನಿ ಧರ್ಮ ನೈ ।
ರುತಿ ವರುಣಾನಿಲಾರ್ಥಪ ಹರರ್ ನಗುವರ್ ಮುಳಿಗುಂ ಮುರಾರಿ ವಾ
ಕ್ಪತಿ ಪಟಿಗುಂ ಮನೋಜರಿಪು ಪೇಸುಗುಮಗ್ಗದಕೀರ್ತಿ ಮಾಸುಗುಂ ॥ ೧೩೦

ನುಡಿಯಲ್ಕಕ್ಕುಮೆ ಪಾಟಿಗೆಟ್ಟು ಪಟಿಗಂ ಪಾಪಕ್ಕಮುಳ್ಳಕ್ಕದೀ
ನುಡಿಯಂ ಚಿಃ ಪರದಾರವನ್ಯಶಯನಸ್ಥಾನಂ ಪೆಱರ್ ಮಿಂದ ನೀರ್ ।
ಮುಡಿದುತ್ಫುಲ್ಲ ಕದಂಬಕಂ ತೊಡೆದ ಕಾಶ್ಮೀರಾಂಗರಾಗಾದಿಕಂ
ಮಡಗೂಟ್ ಬೀಱಡೆ ಬಾಯ ತಂಬುಲಮಿದೇನಸ್ಪೃಶ್ಯಮೇನಲ್ಲವೇ ॥ ೧೩೧

(ಪಂಪರಾಮಾಯಣಂ, ೯-೧೮೧.)

ಹಣವಿಲ್ಲದೆ ಪೆಱರೆಳಸುವ
ಗುಣಮಿಲ್ಲದೆ ಗೂಢಮಪ್ಪ ಠಾವಿಲ್ಲದೆ ಕುಂ ।
ಟಣಿಯಿಲ್ಲದಂತೆ ಪೆಂಡಿರ್
ಗುಣವಂತೆಯರಲ್ಲದುಂಟೆ ವಸುಧಾತಳದೊಳ್ ॥ * ೧೩೨

ನೋಡಿಸಿ ನೋಡವೇಟ್ಪ ಭರಮಪ್ಪುದು ಗೌಟಱ ಕೋಣೆಗೇರಿಯೊಳ್
ಕೇಡಱಸಲ್ಕೆ ಪೋಪ ಭರಮಪ್ಪುದು ದೇವಿಗೆ ರಾತ್ರಿಯಾತ್ರೆಯಂ ।
ಮಾಡುವ ನೋಂಪಿಯೊಂದು ಭರಮಪ್ಪುದು ಜಾರೆಯರಾತ್ಮಜಾರರೊಳ್
ಕೂಡುವ ಚಿತ್ತದಿಂ ತೆಱಪನಾಗಿಸಿಕೊಳ್ವರನೇಕ ಭಂಗಿಯಿಂ ॥ ೧೩೩

---

[1] ಕ (ಅ). [2] ನಿವನಾ (ಅ). [3] ನೆ (ಆ). [4] ಪಾ (ಕ.ಖ.ಬ). [5] ನುತ (ಕ), ಯುತ (ಖ.ಬ). [6] ಯಿಂ (ಖ.ಖ). * ಈ ಪದ್ಯ (ಖ.ಬ.) ಪ್ರತಿಗಳಲ್ಲಿಲ್ಲ.

ಕಱು ತಡೆದತ್ತು ಕಂಚನುಣಲೂಮನೆಯೂಕೆಗಳುಯ್ದರಕ್ಕ ಮಿಂ
ದೆಱೆಯಪನಾ[1]ಱು[1]ದಪ್ಪನಸಗಂ ಮ[2]ಡಿ[2]ದಾರನೆ ಕೂಸನೇತಕೆಂ ।
ದೞಿಯೆನದೊಂದು ಸೋಂಕಿದುದು ಪಾಡುವರಲ್ಲಿ ಬೆದಂಡೆ [3]ತೊ[3]ತ್ತನೆ
ತ್ತಱಿಸುವೆನೆಂದು ಪೋಪ ನೆವಮಂ ಸಮಕಟ್ಟುವರಲ್ಲಿ ಪಾಣ್ಬೆಯರ್ ॥* ೧೩೪

ಗಿಡುವಂ ಪಿತ್ತಿಲನೋಣಿಗೇರಿಡುಕುಱಿಂ ಪ್ರಾಕಾರಮಂ ನುರ್ಗಿದಂ
ಗಡಿಯಂ ಬೇಲಿಯನಿಕ್ಕಿಸಿರ್ದ ತಳಿಯಂ ನೀರ್ದಾಣಮಂ [4]ತೋಟಮಂ[4] ।
ಮಡಲಿಟ್ಟಾರವೆಯಂ ಬಟಿಲ್ದ ಮದಿಲಂ ಮಣ್ಗೊಂಡ ತುತ್ತಲ್ಗಳಿ
ಟ್ಟೆಡೆಯಂ [5]ಬಿಟ್ಟ[5]ಟಿದೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ ॥ ೧೩೫

ದಾರಿಯೊಳಿಡುಕುಱೊಳೋಣಿಯೊ
ಳಾರವೆಗಳ ತಳದೊಳಂಗಡಿ[6]ಯ ಮನೆಗಳೊಳಂ[6] ।
ಕೇರಿಯೊಳಾ[7]ವಿ[7]ಗೆಗಳೊಳಂ
ಬೇರೂಱಿತು ಜಾರರನುಭವಂ ಕಟ್ಟಲೆಯೊಳ್ ॥ ೧೩೬

(ಗಿರಿಜಾಕಲ್ಯಾಣಂ, ೪–೮೨.)

ಒದವಿದ ಕಟ್ಟಲೆಯೊಳ್ ಸ
ನ್ಮದದಿಂ ಪೊಱಮಟ್ಟ ಜಾರಮಿಥುನಾಳಿಗೆ ಕಂ ।
ಡುದೆ ಭರವೆಳಸಿತೆ ಮನವಿ
ರ್ದುದೆ ಮನೆ ಪಟ್ಟಿದುದೆ ಪಾಸು ಮುಟ್ಟಿತೆ ಮರ್ಮಂ ॥ ೧೩೭

(ಗಿರಿಜಾಕಲ್ಯಾಣಂ, ೪–೮೪.)

ಆಗಳುಮಾ ತಳೋದರಿಗೆ ಮೇಖಲೆಯಾಗಿ ನಿತಂಬದೊಳ್ ಕುಚಾ
ಭಾಗದೊಳೆಯ್ದೆ ಹಾರಲತೆಯಾಗಿ ರದಚ್ಛದಪಲ್ಲವಂಗಳೊಳ್ ।
ರಾಗವಿಶೇಷಮಾಗಿ ಪೊಳೆವೊಳ್ಪೊಡೆಯೊಳ್ ನಿಱು ಸೋಂಕಿ ಸಂ
ಭೋಗಿಪ ಭಾಗ್ಯಮಿಲ್ಲೆನ[8]ಗೆಯಾದೊಡೆ ಸಲ್ಲದೆ[8] ಗಂಡನಿರ್ದೊಡಂ ॥ ೧೩೮

(ಅನಂತನಾಥಪುರಾಣಂ, ೧೧–೨೨.)

ಬಿಡಬೇಡಣ್ಣಲೆ ಬೀಡುಗೊಳ್ವೊಡೆನಸುಂ ಕಣ್ಗಾಣಳೆಮ್ಮತ್ತೆ ನೋ
ಟ್ಟಿಡೆ ಮಾವಂ ಶತವೃದ್ಧನೆನ್ನ ಪತಿಯುಂ ಬೇರೂರ್ಗೆ ಪೋಗಿರ್ದನಾಂ ।

---

[1] ಡಿ. (ಕ), ಲಿ (ಖ.ಬ.) [2] ಟ (ಕ). [3] ನೊ (ಕ). * ಈ ಪದ್ಯದ ಮೊದಲನೆಯ ಪಾದವನ್ನು ಶಬ್ದಮಣಿದರ್ಪಣದ ೧೬೯ನೆಯ ಸೂತ್ರಕ್ಕೆ ಉದಾಹರಣೆಯಾಗಿ ಕೊಟ್ಟಿದೆ. [4] ತೊಟ್ಟಿದುಂ (ಖ.ಬ). [5] ಬಟ್ಟ (ಕ). [6] ಗಳೊಳ್ ಮನೆಯೊಳ್ (ಅ.ಕ). [7] ಡಿ (ಖ.ಬ). [8] ಗಮಾಡದೆ ಸಾಲದೆ (ಖ.ಬ).

ಪಡುವೆಂ ಮೂಡಣ ಕೋಣೆಯಲ್ಲಿ ಸುಟಿವರ್ ಮತ್ತೊಬ್ಬರಿಲ್ಲೇಕೆ ನೀಂ
ಬಿಡಬೇಡೆಂದತಿಜಾತಿಜಾರೆ ನುಡಿದಳ್ ಜಾರಂಗೆ ವಕ್ರೋಕ್ತಿಯಿಂ ॥ ೧೩೯

ಪಡುವಳ್ ಕೀಟಲೊಳೆಮ್ಮ ತೊಟ್ಟು ಪಡುವಳ್ ಮುತ್ತಬ್ಬೆಯಾ ಕೋಣೆಯೊಳ್
ಪಡುವಂ ಶಕ್ತಿವಿಹೀನನಂಧಬಧಿರಂ ಕೇ[1]ಳ್ ಮಾವನಾ[1] ಬಾಗಿಲೊಳ್ ।
ಪಡುವೆಂ ಬಾಲೆಯೆನೊರ್ವಳಿಲ್ಲಿ ಮನೆಯಾಣ್ಮಂ ಪೋದನಿಂದೂರ್ಗೆ ನೀಂ
ಪಡ[2]ಲೇನೆಂದೆ[2]ಡೆವೇಡುವಯ್ ಪಥಿಕ ಮತ್ತೀ ಪೊ[3]ಟ್ಟಿನೊ[3]ಳ್ ಗಾಂಪನೇ ॥ ೧೪೦
(ಕಾವ್ಯಾವಲೋಕನಂ, ೭೧೬.)

ಉಗುರಂ ತೋಱಿದ ಕಯ್ಗಳಂ ಮುಗಿದ ಬಾಹಾಸ್ಪರ್ಶನಂಗೆಯ್ದು ಸ
ನ್ನೆಗಳಂ ಚಿತ್ತದೊಳಾಳ್ದು ಕೇತಕವನಾನೀಕಕ್ಕೆ [4]ದೇವಾಲಯಾ[4] ।
ಳಿಗೆ ನಾನಾಲತಿಕಾಲಯಕ್ಕೆ ಕೆಲಬರ್ ದೂತಟ್ಟಿದರ್ ಪೋದರಾ
ಬಗೆಗಳ್[5]ದೂದವ[5]ರಾಗೆ ಕೈತವಕಲಾವಿಸ್ತಾರೆಯರ್ ಜಾರೆಯರ್ ॥ ೧೪೧

ಕಳಚಿ ಪಳಂಚಿ[6]ಪುಂ[6]ಗುರವನುಟ್ಟಳವಟ್ಟಿರೆ ಮಲ್ಲಗಂಟಿನೊ
ಳ್ಪಳವಡೆ ಕಟ್ಟಿ ಚೊಲ್ಲೆಯಮನನ್ನಿಗೆಯುಂ ಸಮಕಟ್ಟಿ ತೊಟ್ಟು ಕೆಂ ।
ದಳದೊಳಮರ್ಚಿ ಬಾರಿಸುತೆ ಬೊಂದುಗೆಯಂ ಕುಱುಪಿಂಗೆ ಪೋದಳ
ವ್ವಳಿಸುತಮಾಗಳೊರ್ವಳಭಿಸಾರಿಕೆ ವೀರಪಿಡಂಬಯಾನದಿಂ ॥ ೧೪೨

[7]ನಱು[7]ಸುಯ್ಗಿಂ ತನುಸೌರಭ[8]ಕ್ಕಮು[8]ಳಿವ್ವಂದಂ ಡಂಗುರಂಬೊಯ್ದಮುಂ
[9]ದಱಿ[9]ವಂ ತಪ್ಪವು ಕಾಳವೆಂಬ ಕಡಲೊಳ್ ಕಣ್ಣೆಂಬ ಮೀರ್ಗಳ್ ದುಡು ।
[10]ಮ್ಮಿಱಿಯು[10]ತ್ತಿರ್ದಪವೆಂತು ನಲ್ಲನೆಡೆಗೊಯ್ವೆಂ ನಿನ್ನನಾವಂದದಿಂ
ದಱಿಯಿಪ್ಪೆಂ ಹಱೆಗುಟ್ಟಿ ಹಾದರಮನಾಡಲ್ ಪೋಪರೇ ಜಾರೆಯರ್ ॥ ೧೪೩

ದೆಸೆಯಂ ನೋಡದಿರಕ್ಕ ನಿನ್ನ ಧವಳಾಪಾಂಗಂ ಪೊದಟ್ಟಿಪ್ಪುದಿ
ನ್ನುಸುರಲ್ವೇಡೆಲೆ ಮುಗ್ಧೆ ನಿನ್ನ ದಶನೇಂದುಜ್ಯೋತ್ಸ್ನೆ ನೀಳ್ದಪ್ಪುದೆಂ ।
ದಸಮಾಲಂಬಿಕೆ ಮೌನೆಮಾಡಿ ಸಖಿಯಂ ಸಂಕೇತಸದ್ಮಕ್ಕೆ ಪ
ಲ್ಲಿಸರಂದೋಱುತೆ ಮುಂದೆ ಮುಂದೆ ನಡೆ[11]ದೊಯ್ದಳ್[11] ದೂತಿ ಚಾತುರ್ಯದಿಂ ॥

ಕ[12]ಳೆದು[12] ಪಳಂಚಿನುಂಗುರುಮನೇಱೆಮುಸುಂಕಿ ಮುರಳ್ಚಿ ಸೆಕ್ಕಿ ಮೇ
ಖಳೆಯೊಳಡಂಗುವಂತೆ ನಿಱಿಯಂ ಸೆಱಗಿಂ[13]ಪೊದೆದುಟ್ಟು[13] ದೂತಿ ಕೈ ।

---

[1] ಳಜ್ಜನೀ (ಅ). [2] ಲೆಂದೆಂತೆ (ಅ). [3] ಟ್ಟಱೊ (ಅ). [4] ದ್ಯೆವಗ್ರೃಹಾ (ಖ.ಬ). [5] ಧೂದವ (ಖ.ಬ). [6] ನುಂ (ಕ). [7] ನೆಱೆ (ಕ). [8] ಕ್ಕೆಯ (ಖ.ಬ). [9] ಗುರು (ಖ.ಬ). [10] ಮಿರಿವು (ಖ.ಬ). [11] ದಳ್ ತದ್ದೂ (ಕ). [12] ಳಚಿ (ಕ). [13] ಪೊಱಮಟ್ಟು (ಕ[6]), ಮಿಗೆ ಪೊರ್ದು (ಖ.ಬ).

ಕೊಳಿಸಿದ [1]ಬುದ್ಧಿ[1]ಯಿಂದೆಡಪಿ ನೊಂದೊಡ[2]ಮಾ[2]ಯೆನಲಮ್ಮದಂಘ್ರಿಯಂ
ತಳದೊಳವುಂಕುತಂ ನಡೆದು ಕಾಹಿನಗೇಹಮನೊರ್ವಳೆಯ್ದಿದಳ್॥ ೧೪೫

ಎಳಸಿ ಕಳವಳಸಿ ತಿಳಿಪುವ
ಮು[3]ಳಿವೆಡೆ[3]ಗೆಡೆಯಿಲ್ಲದಡರೆ [4]ಕೆಲ್ಲೈ[4]ಸಿ ಕವ ।
ಲ್ದೊಳಗೊಳಗೆ ಬಳೆದಲಂಪೊಡ
ನಳುರೆ ಪದಂ ಪದದೊಳೊದವೆ ಬೆರಸು[5]ತ ನಡೆದರ್[5] ॥ ೧೪೬

ಮುಳಿಸಾಗಳೆ ತಿಳಿವಾಗಳೆ
ಮನದಾಸಱನುಸುರ್ವ[6]ವೇಗ[6]ಮಾಗಳೆ ತರದಿಂ ।
ನನೆಕೊನೆ[7]ವ್ರೇಪ್ಪು[7]ದುಮಾಗಳೆ
ಮನಸಿಜನ ಮಹೇಂದ್ರಜಾಲವದು ಜಾರೆಯರೊಳ್॥ ೧೪೭

ಕರುಮಾಡಂ ಬಕ್ಕಬಯಲ್
ಸಿರಿ[8]ಮಂಚಂ[8] ಬೀದಿಯೆಂದು ಬಗೆಬಂದೆಡೆಯೊಳ್ ।
ನೆರೆಯಲ್ ಜಾರರ್ ಬಯಸುವ
ವರಮಂ ಸ್ಮರಸಿತ್ತನೆನಿಪ ಪೆರ್ಗತ್ತಲೆಯೊಳ್॥ ೧೪೮

ಗಳರುತಿ ತಾಲರತ್ಕೃತಿ ಸಚುಂಬನಸೀತ್ಕೃತಿ ಹಸ್ತತಾಡನಂ
ಗಳವಿಲುಠತ್ಥಟತ್ಕೃತಿ ಲಯಂಗಳೊಳೊಂದಿ ರತೋತ್ಸವಂಗಳಂ।
ಬಳೆಯಿಸಿ ಕಾದಲರ್ಗೆ ಮೆಱೆದರ್ ಬಹುವಾದಿತ ಭೋಗದೇವತಾ
ನಿಳಯದ ಪಕ್ಕದೊಳ್ ಚದುರೊಡಂಬಡೆ ಕೂಡುವ ಜಾತಿಜಾರೆಯರ್॥ ೧೪೯

ಏನಸುಂ ಜಾರರ್ಗದೇಂ ಪ್ರೀತಿಯನೊಡರಿಸಿತೋ ಸ್ವೈರಿಣೀಸ್ವಲ್ಪಕಂಠ
ಧ್ವನಿ ಕಿಂಚಿಚ್ಚುಂಬನಂ ಸೀತ್ಕೃತಿವದನರವಂ ಮಂದನಿಶ್ವಾಸನಂ ಗೂ।
ಢನಖೋಲ್ಲೇಖಾಂಕಮೀಷದ್ವಚನರಚನವಾಕ್ಪ್ರೌಢಿ ಶೀಘ್ರಾಕುಳಾಲಿಂ
ಗನಮೀಷತ್ತಾಡನಂ ಸಂಕುಚಿತರತಿ ಚಳಾಪಾಂಗಮುತ್ಕಂಪಿತಾಂಗಂ॥ ೧೫೦

ಜನಿತಾಹ್ಲಾದಾಕು[9]ಳಾ[9]ಲೋಕನಮುಪಚಿತಸಂಪರ್ಕತಾಂಬೂಲದಾನಂ
ಮುನಿಸಂ ಕೈಕೊಳ್ವ ಕಿಂಚಿತ್ಪ್ರಣಯಕಲಹ[10]ಮು[10]ತ್ಕ್ಯುತ್ಸುಕವ್ಯಾವೃತಾಲಿಂ।

---

[1] ಬಟ್ಟೆ (ಖ.ಬ). [2] ಮಃ (ಖ.ಬ). [3] ಳುವಡಿ (ಕ). [4] ಕೇಡ್ಮೈ (ಕ). [5] ವಪದದೊಳ್ (ಕ). [6] ಮಾತು (ಖ.ತ). [7] ಯಪ್ಪು (ಖ.ಬ). [8] ಮಾಡಂ (ಕ). [9] ಳಂ (ಖ.ಬ). [10] ರ (ಖ.ಬ).

ಗನಮುಸ್ವ[1]ಷ್ಪೋಲ್ಲಸ[1]ಚ್ಚುಂಬನಮುಸದೃಶವಾಗ್ಜಲ್ಪ[2]ಮವ್ಯ[2]ಕ್ತ ಕಂಠ
ಸ್ವನಮಿಾಷತ್ತಾಡನಂ [3]ಬಿತ್ತ[3]ರಿಸೆ ನೆರೆದುದೋರಂದದಿಂ ಜಾರವೃಂದಂ॥ ೧೫೧
(ಕುಸುಮಾವಳಿ, ೪–೩೬.)

ಪಾರದೆ ಬರ್ಪ ದೂದವಿಯರಂ ತವಕಂ ತ[4]ವೆ[4] ಮಿಕ್ಕು ನೀವಿ[5]ಯಂ[5]
ಚಾರು ಕಳಾಪ[6]ದೊಳ್[6] ನಿಲಿಸುತುಂ ದೆಸೆಯಂ ನಸು ನೋಡುತುಂ ಪೊದ ।
ಬ್ಧೂರು[7]ತಟಂ[7]ಗಳಿಂದಿಟಿವ ನಾಣ್ಬದನಂ ನಿಱಿಯಿಂದಮೊತ್ತುತುಂ
ಜಾರೆಯರೆಯ್ದಿತಿರ್ದರುಪಕಾಂತರ[8]ನಾ ಬಹಳಾಂ[8]ಧಕಾರದೊಳ್ ॥ ೧೫೨
(ಕುಸುಮಾವಳಿ, ೪–೩೫.)

ಎಡಗಯ್ಯಿಂ ನೀವಿಯಂ ಸಾರ್ಚುತಮುರಸಿಜದೊತ್ತಂಬದಿಂ ಬಳ್ಕುತುಂ ಸೋ
ರ್ಮುಡಿಯಂ ಸೈತೊತ್ತುತುಂ ನೂಪುರಮನೆ ಪದದಿಂದುರ್ಚಿ ಕೈಗಿಕ್ಕುತುಂ ಕ ।
ಣ್ಗಡಿಬೆಳ್ಪಿಂಗಂಜಿ ಚೀನಾಂಶುಕದ ಸೆಱಗನಡ್ಡೈಸುತುಂ ನಾಡೆಯುಂ ಮೆ
ಲ್ಲಡಿಗೆಂಪಿಂ ಧಾತ್ರಿಯಂ ಚಿತ್ರಿಸುತಮುಸತಿಯರ್ ಪೋದರಂತತ್ತಮಿತ್ತಂ ॥ ೧೫೩
(ಕುಸುಮಾವಳಿ, ೪–೩೪.)

ಪೊದಟದ ಲಜ್ಜೆ ಪಲ್ಲಟಿಸದಾಸನಮುಳ್ಕದ ಬೈಗುಳುಣ್ಮಿ ಪೋ
ಣ್ಮದ ನಱುಸುಯ್ಗಳುಚ್ಚಳಿಸಿ ಪತ್ತದ ಬಾಯ್ ಪಿಡಿದಾಗಳಾರ್ಪು ನಾಂ ।
ಟದ ನಖರೇಖೆ ಪಲ್ಲ ಕೊನೆದಾಗದ ಚುಂಬನವೆಂಬಿವಿಚ್ಚೆಯೊಳ್
ಪುದಿದಿರೆ ಮೆಚ್ಚಿದಳ್ ನೆರೆದು ಪೋಪವಳೋಪನ ಜಾಣಕೇಣಮಂ ॥* ೧೫೪

ಮೊಲೆಬಿಣ್ಪಿಂ ಬಳ್ಕುತುಂ ಮೆಲ್ಲನೆ ಪದವಿಡುತುಂ ನೀಳ್ದಪಾಂಗಂಗಳಿಂದಿ
ರ್ಕೆಲನಂ ನೋಡುತ್ತುಮೆತ್ತಂ ಸುಟಿವ ನೆಟಲನಾರಯ್ಯುತುಂ ದೂರದಿಂ ಬ ।
ರ್ಪುಲಿಪಂ ಕರ್ಣಾವತಂಸಕ್ಕೆಱಗುವಳಿಗಳಂ ಸೋವಿ ನಿಂದಾಲಿಸುತ್ತುಂ
ಚಳವೇಣೀಭಾರದಿಂದೋಸರಿಸುವ ಮುಸುಕಂ ಸಾರ್ಚುತುಂ ಪಾಣ್ಬೆ ಪೋದಳ್ ॥
(ಲೀಲಾವತಿ, ೩–೧೩.)

ತಿಂಗಳ ಕಾಂತಿಯಂ ಪಟಿಗುಮೀ ಸೊಗಯಿಪ್ಪಲರ್ಗಣ್ಣ ಕಾಂತಿಯೆಂ
ದಂಗನೆ ತನ್ನ ಹಸ್ತಯುಗದಿಂದವನೊಯ್ಯನೆ ಮುಚ್ಚಿಕೊಂಡು ಕಾ ।
ಲುಂಗುರಮಂ ಪಳಂಚಲೆಯಲೀಯದೆ ದಾರದೊಳೆತ್ತಿ ಕಟ್ಟಿ ಜಾ
ರಾಂಗನೆ ಜಾರನಿರ್ದೆಡೆಗೆ ದೂತಿಸಿ ಪೋಪವಳೊರ್ವಳೊಪ್ಪಿದಳ್ ॥* ೧೫೬

[1] ಷ್ವಾಲಸಾ (ಖ.ಬ). [2] ವಧ್ವ (ಖ.ಬ). [3] ಭೀಕ (ಖ.ಬ). [4] ರೆ (ಕ). [5] ಯೊಳ್ (ಕ). [6] ಮಂ (ಅ). [7] ಯುಗಂ (ಅ). [8] ನಂದು ಮಹಾಂ (ಅ).
* ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಕಲ್ಲೆನ್ನದೆ ಮುಳ್ಳೆನ್ನದೆ
ಸಲ್ಲಲಿತಸ್ಥಾನಮೆನ್ನದಿರ್ದಿರ್ದೆಡೆಯೊಳ್ ।
ಪಲ್ಲವಿಸಿಯೆ ಪೂತುದು ಫಲ
ವಲ್ಲರಿಯಂ ತಳೆದುದಮಮ ಜಾರರ ಸುರತಂ ॥ ೧೫೭

(ಗಿರಿಜಾಕಲ್ಯಾಣಂ, ೪-೮೭.)

ಆಱದ ಬೆಮರಟೆದ ಕುರುಳ್
ಜಾಱಿದ ಮುಡಿ ಬಾಡಿದಧರ ನಖದೊದವಿಂ ಕೆಂ ।
ಪೇಱಿದ ಕಣ್ ಬಿಟ್ಟ ಮನಂ
ಮಾಱುತ್ತರವೆರಸಿವೆರಸಿ ಜಾರೆ ಜಗುಟ್ಟಳ್ ॥ ೧೫೮

ಜಾರಂ ಸಂಕೇತಗೇಹಾಂತರದೊಳುಳಿದು ತನ್ನೀಪವಳ್ ಬರ್ಪ ಸ್ವೈಪಂ
ಪಾರುತ್ತಿರ್ಪನ್ನಮೊರ್ವಳ್ ತ್ವರಿತದೆ ಪರಿತಂದಾತ್ಮಚಿತ್ತೇಶನೆಂದಾ ।
ಜಾರಂ ತನ್ನಾಕೆಯೆಂದಂತೊಡವೆರಸಿ ಬಟಿಕ್ಕೆಯ್ದೆ[1]ಕಾ[1]ಮಗ್ರಹಂ ತೀ
ರ್ದಾರಯ್ದೀರೊರ್ವರಂ[2]ದಂತ[2]ಹಹ ಎನುತವರ್ ನಕ್ಕು ಕೈಪೊಯ್ದು ಪೋದರ್ ॥

ಪದೆದಮರ್ದಪ್ಪಿಯಾತುರಿಸಿ ನೋಡಿದ ಕೂಡಿದ ಕೂಡೆ ಮಾತನಾ
ಡಿದ ಪದೆದಿತ್ತ ತಂಬುಲದ ಚುಂಬನದಿಂಬುಗಳಿಂದ್ರಜಾಲವ ।
ಲ್ಲದು ಕನಸಲ್ಲವಲ್ಲ [3]ನೆ[3]ನಸೆಂಬ ವಿಕಲ್ಪಮನಿಟ್ಟು ಚಿತ್ತದೊಳ್
ಕುದಿಪಮಡಂಗದೆಟ್ಟು ಸರಿದರ್ ತ್ವರಿತಂ ಸಲೆ ಸಂದ ಜಾರೆಯರ್ ॥ ೧೬೦

ಪೊದೆದ ನವೀನ ನೀಲಪಟವಿಕ್ಕಿದ ಕತ್ತುರಿಯಣ್ಪು ತೊಟ್ಟ ನೀ
ಲದ ತೊಡವೊಪ್ಪೆ ಜಂಗಮತಮಃಕಳೆಯಂತೆ ತಮಸ್ತಮಾಲವೃ ।
ಕ್ಷದ ಚಳಶಾಖೆಯಂತೆ ತಮದೊಡ್ಡಿನ ಲೋಲಪತಾಕೆಯಂತೆ ಪ
ರ್ಬಿದ ತಮ[4]ದೊಡ್ಡಿ[4]ನೊಳ್ ಸುಟಿದರಸ್ಫುಟಚಾರೆಯರಂದು ಜಾರೆಯರ್ ॥ ೧೬೧

(ಜಗನ್ನಾಥವಿಜಯಂ, ೧೬-೧೦೨.)

ಪದುಳಿಸದಂಗಮೆಟ್ಟಱದ ಕಣ್ಮಲರಾಱದ ಸೇದೆ ಮಗ್ಗುಲಿ
ಕ್ಕದ ಪುಳಕಂಗಳಿಂಗದ ಬೆಮರ್ ಮಿಡುಕೋಡದ ಪುರ್ವು [5]ಕೆತ್ತುಗುಂ ।
ದದ ಕುಚ ಬೀಗಿ ಬೀಯದಧರಂ[5] ನಡುಕಂಗಿಡದೂರು ಗಂಡೆಯೇ
ಟದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ ॥ ೧೬೨

(ಲೀಲಾವತಿ, ೩-೧೫.)

---

[1] ನಾ (ಬ). [2] ಕಂಡ (ಖ.ಬ). [3] ನ (ಕ.ಖ). [4] ದುರ್ವಿ (ಕ). ಬೀಗಿ ಬೀಯದ ತುಟಿಕೆತ್ತುಗುಂದದ ಕುಚಂ (ಅ).

ಇಂದುಪವಲ್ಲಭಂ ಮುಳಿಯೆ ದೂದವಿಗಾದುದಜೀರ್ತಿ ಬಿದ್ದಿನರ್
ಬಂದರಬುತ್ತಮಿರ್ದಪುದು ಕೂಸಿನಿಸಂ ತೊಲಗಂ ಗೃಹಾಧಿಪಂ ।
ಬೆಂದುದು ಸೂಚಿಶಾಲೆ ಪೊಸತಾಯ್ತು ತಳಾಚಿಕೆಯಿಂದು ಮೂಡಿದಂ
ಒಂದಡಸಿರ್ದೊಡೇಟಡಸಿತೆಂಬುದು ತಪ್ಪುಗುಮೇ ತಳೋದರೀ ॥* ೧೬೩

ಎತ್ತುತ್ತುಂ ಕಟಿಸೂತ್ರಮಂ ನಸು ಬಟಲ್ದಿರ್ದುಟ್ಟುದಂ ಕೇಶದಿಂ
ದೊತ್ತುತ್ತುಂ ಪ್ರಿಯಚುಂಬಿತೋಷ್ಠಮಣಿಯಂ ವ್ಯಾಲಂಬದಿಂ ಮೆಲ್ಲನೊ ।
ಳ್ಗೊತ್ತುತ್ತುಂ ಪರೆದಿರ್ದ ಕುತ್ತುನವಿರಂ ದಿಗ್ಭಿತ್ತಿಯಂ ಬೆರ್ಚಿ ನೋ
ಡುತ್ತುತ್ತುಂಗ ನಿತಂಬೆ ಬಂದಳಿರುಳೊಳ್ ಜಾರೋಪಭೋಗಾಂತದೊಳ್ ॥ ೧೬೪

ಮದನಾಂಬುಪ್ಲವದುರ್ಕು ಮಟ್ಗದೆ ಲಸತ್ಪೀನಸ್ತನಂ ಕೆತ್ತುಗುಂ
ದದೆ ಸುಯ್ ನಿಲ್ಲದೆ ಕಣ್ಗಳೆಚ್ಚಱದೆ ಘರ್ಮಾಂಭಃಕಣಾನೀಕಮಿಂ ।
ಗದೆ ರಂಭೋರುವ ಕಂಪಮುಟ್ಗದೆ ನಿಜೋಷ್ಠಸ್ಪಂದನಸ್ಫೂರ್ತಿ ಮಾ
ಣದೆ ಮೆಯ್ಸೇದೆಯದಾಱದಿಂತು ಸುಸಿಲಿಂದಾ ಪಾಣ್ಬೆಯರ್ ಪಿಂಗಿದರ್ ॥ ೧೬೫

(ಕುಸುಮಾವಳಿ, ೪–೩೭.)

ಒಂದೆರಡೊಳ್ನುಡಿ ತವಕದೊ
ಳೊಂದೆರಡಾಲಿಂಗನಂ ಮುಗುಳ್ನಗೆ ನೋಟಂ ।
ಸಂದಣಿಸುವ ಮುಂಬದನೊಳ
ಗಿಂದೀವರನಯನೆ ಪಾಣ್ಬನಂ ಬೀಳ್ಕೊಂಡಳ್ ॥ ೧೬೬

ನಿಡುಸುಯ್ಲುಂ ತನ್ನನೊತ್ತಂಬರಿಸೆ ನಿಲುಪುತುಂ ನೀಳ್ದ ನಲ್ಕೇಶದಿಂದಂ
ತೊಡೆಯುತ್ತುಂ ತೊಂಡೆವಾಯಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ ।
ನುಡಿಯುತ್ತುಂ ಪಾಣ್ಬನೊಳ್ ಕೂಡಿದ ರತಿವಿಷಯಖ್ಯಾತಿಯಂ ತನ್ನೊಳಾಗಳ್
ನಡೆಯುತ್ತುಂ ಪಾಣ್ಬೆಯೊರ್ವಳ್ ನಿಜಮಣಿಭವನದ್ವಾರದೊಳ್ ಬಂದು ನಿಂದಳ್ ॥*

ವನರುಹಕಾಂ[1]ತ[1]ಕುಟ್ಮಳಕಮಂಡಲುರಾಜಿನಿ ಹಂಸಮಾಲಿಕಾ
ತನುಸಿತವಲ್ಕಭಾಜಿನಿ ಮೃಣಾಳಲತಾಲ[2]ತಿಕೋ[2]ಪವೀತರಂ ।
ಜಿನಿ [3]ಕಲ[3]ತದ್ವಿರೇಫ ನಿವಹಾಕ್ಷಸಮಾಜಿನಿ ಶೋಕದಿಂ ಸರೋ
ಜಿನಿ ದಿನಕೃದ್ವಿಯೋಗದೆ ತಪಸ್ವಿನಿ[4]ಯಾದ[4]ವೊಲಾದವೊಪ್ಪಿದಳ್ ॥ ೧೬೮

(ಕಾದಂಬರಿ, ಪೂ.ಭಾ., ೨೭೮.)

---

* ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ. [1] ತೆ (ಖ.ಬ). [2] ಲತೋ (ಅ). [3] ವಳಿ (ಅ). [4] ಯಂತೆ (ಅ).

ಮುಳಿದ ತಿಮಿರೇಭಕುಂಭ
ಸ್ಥಳಮಂ ಶಶಿಸಿಂಹವೊತ್ತಿಸೀಳಲ್ ಮುಕ್ತಾ !
ಫಲಮುದಿರ್ದವೊ ನಭದೊಳಗೆನೆ
ಬೆಳಗಿದುವತಿ ಬಹಳ ತರಳ ತಾರಾನಿಕರಂ ‖ ೧೬೯

ತಾರಗೆಯ ಬೆಳ್ಪು ನವಸಂ
ಧ್ಯಾರುಣ ರುಚಿಯೊಳ್ ಪ[1]ಳಚ್ಚನೆಸೆಯೆ[1] ಮಹೋದ್ಯ ।
ದ್ವಾ[2]ರದೆ[2] ನಿಮಿರ್ಚೆ ಪರ್ಬಿದ
ಸಾರಂಗದ ತೊವಲವೊಲ್ ವಿರಾಜಿಸಿ ತೋರ್ಕುಂ ‖ ೧೭೦

ಲೀಲೆವಡೆದೆಸೆವ ತಾರಾ
ಮಾಲೆಯು ಜಲಜಲಿಸಿ ಪೊಳೆವ [3]ಪೊಳೆಪು[3]ಗಳಿಂದಂ ।
ಸೋಲಿಸೆ ಪೂವಲಿಗೆದಱಿದ
ನೀಲದ ರಂಗದವೊಲೆಸೆದುದಾಕಾಶತಳಂ ‖ ೧೭೧

ಅಂಬರತಳದಿಂದಿನನಪ
ರಾಂಬುಧಿಯೊಳ್ ಬೀಳೆ ನೆಗೆದ [4]ಸೀರ್ಪ[4]ನಿಗಳೊ ಪೇ !
ಳೆಂಬಿನೆಗಂ ತಾರಾನಿಕು
ರುಂಬಂ [5]ಸೊಗಯಿಸಿದುವೆಯ್ದೆ[5] ಗಗನಾಂತರದೊಳ್ ‖ ೧೭೨
(ಕಾದಂಬರಿ, ಪೂ.ಭಾ., ೨೬೯.)

ತರತರದಿಂದೆಂಟುಂ ದಿ
ಕ್ಕರಿಗಳ್ [6]ನೆರೆದೊಟ್ಟಿ[6]ಕೊಳ್ವ ಕರಪುಷ್ಕರ ಶೀ ।
ಕರವೊಗೆದು ತೋರ್ಪುವೆನಲಂ
ಬರತಳದೊಳ್ ತುಱುಗಿ ಮಿಱುಗಿದುವು ತಾರಗೆಗಳ್ ‖ ೧೭೩
(ಕಾದಂಬರಿ, ಉ.ಭಾ., ೧೪೩).

ಇಳೆಗೆ ಪಟಗಾಲದಂಬರ
ವೊಳ[7]ಜೋಲ್ಗು೦[7] ಬೀಟ್ಗುವೆಂದು ಧಾತ್ರಂ ಬಲ್ಪಿಂ ।
ದಳವಡೆ ಬೆಟ್ಟಿದ ಬೆಳ್ಳಿಯ
ಮೊಳೆಗ[8]ಳಿವೆನೆ[8] ತೊಳಗಿ ಬೆಳಗಿದುವು ತಾರಗೆಗಳ್ ‖ ೧೭೪
(ಜಗನ್ನಾಥವಿಜಯಂ, ೧೬-೯೯)

---

[1] ಳಂಚರೆಯು (ಖ.ಬ). [2] ರಥಿ (ಕ). [3] ಕದಪು (ಖ.ಬ). [4] ನೀರ್ವ (ಖ.ಬ).
[5] ಪಸರಿಸಿದುದೆಯ್ದೆ (ಖ.ಬ). [6] ನೀಳ್ದೆತ್ತಿ (ಖ.ಬ). [7] ಸಾರ್ಗುಂ (ಅ). [8] ಳಿವರ್ (ಅ).

ಇರದುದಯಗಿರಿಯ ದರಿಯೊಳ್
ಸುರಕರಿ [1]ಮಜ್ಜನ[1]ಕೆ ಸಾರ್ದು ಸುಯ್ಯಲೊಡಂ ಪು ।
ಷ್ಕರದಿನೊಗೆವತಿ [2]ವಿಶದ[2]ಶೀ
ಕರಮೆನಿಸಿದುವುದಯಿಪಮಳ ತಾರಾನಿಕರಂ ॥ ೧೭೫
(ಚಂದ್ರಪ್ರಭಪುರಾಣಂ, ೮–೨೨.)

ಗಗನಂ ಮಿತ್ರವಿಯೋಗದಿ
ನೊಗೆದಂತಶ್ಶೂನ್ಯಭಾವ[3]ದಿಂದೊಳ[3] ಮೆಯ್ಯೊಳ್ ।
ಮಿಗೆ ಪನಿತ [4]ಕಣ್ಬನಿಯಿವೆನೆ[4]
ಸೊಗಯಿಸಿದುವು ತರದಿನೊಗೆದು ತಾರಗೆ ಪಲವುಂ ॥ ೧೭೬
(ಚಂದ್ರಪ್ರಭಪುರಾಣಂ, ೮–೨೩.)

ಜವದಿಂ ಪೋದಿನನ ವರೂ
ಥವಾಜಿಗಳ ಮೊಗದೊಳೊಗೆದ ಫೇನಂಗಳ್ ವಾ ।
ಯುವಶದೆ ಪಱಿವಱಿಯಾಗಿ
ರ್ದುವು ಗಗನಾಂಗಣದೊಳೆನಿಸಿದುವು ಭಗಣಂಗಳ್ ॥ ೧೭೭
(ಚಂದ್ರಪ್ರಭಪುರಾಣಂ, ೮–೨೪.)

ನೆಟ್ಟನೆ ಬಂದಪನೆನ್ನಯ
ನಿಟ್ಟೆಯ ನಿಧಿ ಚಂದ್ರನೆಂದು ರಾತ್ರೀವಧು ತಾಂ ।
ಕಟ್ಟಿದ ಬಹುರತ್ನದ ಮೇ
ಲ್ಕಟ್ಟೆನಿಸಿದುದಂಬರಂ ಸುತಾರಾಗಣದಿಂ ॥ ೧೭೮
(ಗಿರಿಜಾಕಲ್ಯಾಣಂ, ೪–೯೩.)

ಸಂಕಲಿತ ಬಹಳ ತಾರಾ
ಸಂಕುಳದಿಂ ಪೋಲ್ತುದಭ್ರಮಾವೃತತಿಮಿರಂ ।
ತೇಂಕುವ ಮಲ್ಲಿಗೆ ಮುಕುಳದ
ಸಂಕುಳಮಂ ತಳೆದು ನಿಂದ ಜಗುನೆಯ ಮಡುವಂ ॥ ೧೭೯

ಓಸರಿಸೆ ಸಂಜೆ ಜವನಿಕೆ
ಯೋಸರಿಸಿದ ತೆಱಿದೆ ರಾತ್ರಿನರ್ತಕಿ ಪುಗುತಂ ।
ಸೂಸಿದ ಪುಷ್ಪಾಂಜಲಿಯೆನೆ
ಭಾಸಿಸಿದುವು ಗಗನರಂಗದೊಳ್ ತಾರಕಿಗಳ್ ॥ ೧೮೦
(ಲೀಲಾವತಿ, ೧೦–೨೪.)

---

1 ಸಜ್ಜರ (ಅ). 2 ವಿತತಿ (ಗ.ಬ.ಖ). 3 ದಿನಪ (ಅ). 4 ಮು ಕಣ್ಬನಿಯಿವೆ (ಖ.ಬ).

ಸ್ಥಿರರಾಜ್ಯಂ ಗೆಯ್ ಕತ್ತಲೆ
ಚಿರಕಾಲಮಿರೆಂದು ಜಾರೆಯರ್ ಪದಪಿಂದಂ ।
ಪರಸಿಡುವ ಸೇಸೆಯಂದದೆ
ಕರಮೆಸೆದುವು ಗಗನರಂಗದೊಳ್ ತಾರಕಿಗಳ್ ॥ ೧೮೧

ಶಶಿ ಬಂದನೆಂದು ವಾರಿಧಿ
ಯೆಸೆದೊಲವಿಂ ನರರ ದಿಟ್ಟಿ ನಟ್ಟಪವೆಂದಾ ।
ಸಸಿಗೆ ನಿವಾಳಿಸಿ ಚೆಲ್ಲಿದ
ಪೊಸ ಮುತ್ತಿನ ಸೇಸೆಯಂತೆ ತಾರಗೆಯೆಸೆಗುಂ ೧೮೨

ಗಗನಂ ಪೂತುದೊ ತಮಮಂ
ಮಿಗೆ ನೋಡುವ ಭರದೊಳಂಬರಂ ನೆಱೆ ತಾನ ।
ಕ್ಷಿಗಳಂ ಪಡೆದುದೊ ಪೇೞೆನೆ
ಸೊಗಯಿಸಿದುವು ತೊಳಗಿ ಬೆಳಗಿ ತಾರಗೆ ನಭದೊಳ್ ॥ ೧೮೩
(ಗಿರಿಜಾಕಲ್ಯಾಣಂ, ೪–೯೦.)

ಅಂಬುಜನಿಜಸಖನಸ್ತಮ
ಯಂಬರವಂಬರದ ನಡುವೆ ಬಹುತರದಿಂ ನೆ ।
ಯ್ದಂಬರದೊಳ್ ಕಯ್ಗೊಳಿಸಿದ
ಚುಂಬಿತ ರತ್ನಂಗಳಂತೆ ತಾರಗೆಯೆಸೆಗುಂ ॥ ೧೮೪
(ಗಿರಿಜಾಕಲ್ಯಾಣಂ, ೪–೯೨.)

ತಮನೆಂಬ ರಾಹುಭಯದಿಂ
ದ್ಯುಮಣಿ ಸ್ಥೂಲತೆಯನುೞಿದು ಕಿಱುಮೂರ್ತಿಗಳಂ ।
ಸಮುಚಿತದಿ ತಾಳ್ದನೆನೆ ಗೃಹ
ಸಮುಚಿತದೊಳ್ ತೊಳಗಿ ಬೆಳಗಿದುವು ದೀಪ್ತಿಕೆಗಳ್ ॥ ೧೮೫

ನೆಲಸಿ ನೆಲೆಗೊಂಡ ಪೆರ್ಗ
ಟ್ಟಲೆಯೊಳ್ ತೊಳತೊಳಗಿ ಬೆಳಗಿ ಮಿನಿಮಿನಿಸುತ್ತಂ ।
ಪಲವುಂ ದೀವಿಗೆಗಳ್ ಕ
ಟ್ಟಲೆ ಪೂತಂತೊಪ್ಪುತಿರ್ದುವಾ ಮನೆಮನೆಯೊಳ್ ॥ ೧೮೬
(ಗಿರಿಜಾಕಲ್ಯಾಣಂ, ೪–೮೦.)

ಆವರಿಸುತಿರ್ಪ ತಮಕೆ ತ
ಮೋವೈರಿ ಧರಿತ್ರಿಗಿೞಿದುಳಿಯಾ[1]ಳ[ದ]ನೆ[1] ದೀ ।

[1] ಳಿನೆ (ಖ.ಬ).

ಪಾವಳಿಗಳೆಸೆದವಖಿಳ ಗೃ
ಹಾವಳಿಯೊಳ್ ಬರ್ಪ ಶಶಿಗೆ ನೀರಾಜಿಪವೋಲ್ ‖ ೧೮೭

ಮಡದಿಯರೆಲ್ಲಂ ಪೊತ್ತಿಸಿ
ತಡೆಯದೆ ಕೈಮುಗಿದು ನೆನೆದು ಮನೆದೇವತೆಯಂ ।
ಕುಡಿವೆರಳೊಳಂಟುವಕ್ಕಿಂ
ದಿಡುವರ್ ಬಾಳರ್ಗೆಯಾ ಸೊಡರ್ಗುಡಿ ಕಪ್ಪಂ ‖ ೧೮೮

ಸೊಡರ್ಗುಡಿಗೆತ್ತಿ ಕೈಮುಗಿದು ಚೇಟಿಯರಂ ಬೆಸಗೊಂಡು ಸನ್ನೆಯಿಂ
ನಡೆದು ಗೃಹಾಂಗಣಕ್ಕಿಳಿಸಿ ತಾರಗೆಯಂ ನಡೆನೋಡಿ ಪಾಟಿಯಿಂ ।
ಕುಡಿವೆರಳಿಂದವೊಲ್ದೆಳಸಿ ಕಾಂತೆಯರೊಯ್ಯನೆ ಸಂಜೆವೋನಮಂ
ಬಿಡುವಿನಮುಬ್ಬಸಂಬಡುತಮಿರ್ದುದು ಪೊರ್ದಿದ ಕಾಮುಕವ್ರಜಂ ‖ ೧೮೯

ಜಗುನೆಯ ಪೂರವೊತ್ತರಿಪ ಗಂಗೆಯಿನೊಡ್ಡಿವಂತೆ ಮರ್ಬಿನು
ರ್ಬುಗಿಬಗಿಯಾಗೆ ಬೆಳ್ಪು ನೆಗೆತಂದುದಯಾದ್ರಿಯ ಸೆಜ್ಜೆರಕ್ಕೆ ಪ ।
ಕ್ಕಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್
ಬಗೆಗೊಳಿಸಿತ್ತು ಚಂದನರಸಂದೊಡೆದಂತಿರೆ ಪೂರ್ವದಿಙ್ಮುಖಂ ‖ ೧೯೦

(ಜಗನ್ನಾಥವಿಜಯಂ, ೧೬–೧೦೩.)

ಉಡುಪತಿ[1][ಯಾ][1] ಪಿಂತನೆ ಬಂ
ದಡಸಿ ಮುಸುಂಕಿರ್ದ ತಿಮಿರನೀಲಾಂಬರಮಂ ।
ಪಿಡಿಯೆ ಭಯಮುತ್ತವೋಲ್ ಬೆ
ಳ್ಪಡ[2]ರ್ದುದು[2] [3]ವದ[3]ನಕ್ಕೆ ಪೂರ್ವದಿಗ್ಬಂಧಕಿಯಾ ‖ ೧೯೧

ಆರಯ್ಯದೆ ಖರಕರನೊಳ್
ವಾರುಣಿ ವಸುವಿಭವಹೀನನೊಳ್ ನೆರೆಯೆ ದರ ।
ಸ್ಮೇರಾನನೆಯಾದ್ಯೆಂದ್ರೀ
ನಾರಿಯ ನಗೆಯಂತೆ ನೆಗೆದುವಿಂದುಕರಂಗಳ್ ‖ ೧೯೨

(ಲೀಲಾವತಿ, ೬–೧೦೯.)

ಉದಯಂಗೆಯ್ದುದ್ದತ್ವಲಾಧೀಶ್ವರನನಮರಕಾಂತಾಳಿನೀರಾಜನಂ ಮಾ
ಡಿದ ಮಾಣಿಕ್ಯಪ್ರದೀಪಾವಳಿಯ ಬೆಳಗು ತದ್ವಾಮವಾಮೇತರಾಶಾ ।

---

[1] ಪತಿ (ಖ.ಬ), ಯಂ (ಗ). [2] ದಂದು (ಖ.ಬ). [3] ವೇ (ಕ).

ಸುದತೀಪಿಷ್ಟಾತಕಾಕೀರ್ಣಕಪಿಶರಜಃಪುಂಜಮೆಂಬಂದದಿಂ ಪೊ
ರ್ದಿದುದೋ ಕಂದರ್ಪಯಾತ್ರಾಬಳಚಳನಪರಾಗಂ ತದುದ್ಯೋತರಾಗಂ ‖ ೧೯೩
(ಅನಂತನಾಥಪುರಾಣಂ, ೭–೭೫.)

ಇದು ಘುಸೃಣಾರುಣಂ ಸುರಹರಿದ್ವನಿತಾನಿಟಿಲಂ ದಿಟಕ್ಕೆ ತಾ
ನಿದು ಬರೆದಿರ್ದ ಸಿಂಧುರದ ಕೆಂಪಡ[1]ರ್ದಿಂದ್ರ[1] [2]ಗಜೇಂದ್ರ[2] ಕುಂಭಮು ।
ಲ್ತಿದು ಜನಿತೇರ್ಷ್ಯೆಯಿಂ ಮುಳಿಯೆ ತಾರಗೆ ಪಾಟಲಮಾದ ಯಾಮಿನೀ
ವದನಮೆನಿಪ್ಪಿನಂ ದಿಟದಿನುಣ್ಮಿದುದಿಂದುವ ರಕ್ತಮಂಡಲಂ ‖ ೧೯೪
(ಚಂದ್ರಪ್ರಭಪುರಾಣಂ, ೮–೧೬ )

ವಿತತಪ್ರಾಚ್ಯಾದ್ರಿಪೀಠಾಗ್ರಿಮದರುಣಶಿಲಾವಿದ್ಧಲಿಂಗಂಬೊಲಿಂಬಾ
ಯ್ತು ತರಂಗೊಂಡೇಳ್ಗೆಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ ।
ದ್ಯುತವಲ್ಲೀಸ್ತಂಭಮುಜ್ಜೃಂಭಿತಕುಮುದಕುಟುಂಬಂ ತಮಶ್ಶೈಲಶಂಬಂ
ರತಿಪಾಟೋಪಾವಲಂಬಂ ಜನಿತವಿಟವಿಡಂಬಂ ಸುಧಾಸೂತಿಬಿಂಬಂ ‖ ೧೯೫
(ಜಗನ್ನಾಥವಿಜಯಂ, ೧೭–೧೦೪.)

ಇದು ಸಂಕ್ರಂದನದಿಗ್ವಧೂನಿಟಿಲಸಿಂಧೂರಾಂಶುವೋ ನೋಡ ನೋ
ಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತವೋ ಪೇಟಿದಿಂ ।
ತಿದು ವಿಸ್ತಾರಿತ ಕಾಮಹೋಮಹುತಭುಕ್ಪ್ರಜ್ವಾಲೆಯೋ ಎಂಬ ಸಂ
ಪದಮಂ ಬೀಱಿದುದಿಂದ್ರದಿಗ್ವಳಯದೊಳ್ ಚಂದ್ರದ್ಯುತಿಪ್ರೋದ್ಭವಂ ‖ ೧೯೬
(ಗಿರಿಜಾಕಲ್ಯಾಣಂ, ೪–೯೫.)

ವಿರಹಿಗಳಂ ಮನೋಜನಲರಂಬುಗಳಂ ತೆಗೆದೂಱಿಕೊಂಡು ಕೊ
ಕ್ಕರಿಸದೆ ಹೃತ್ಕವಾಟಪುಟಮಂ ಬಿರಿಯೆಚ್ಚೊಡೆ ತದ್ಗುಹೌಘದಿಂ ।
ಸುರಿವರುಣಾಂಬುವಂ ಕುಡಿದು ನರ್ತಿಸುತಿರ್ಪ ವಸಂತಡಾಕಿನೀ
ಕರದ ಕಪಾಲಮಿಂತಿದೆನೆ ಕಣ್ಗೆಸೆದಿರ್ದುದು ಚಂದ್ರಮಂಡಳಂ ‖ ೧೯೭

ಕಳಶದ ಬಾಯ ಕೆಂದಳಿರನಂಗಜವಿಪ್ರನ ಹೋಮಕುಂಡದೊಳ್
ಬಳೆದುರಿಯಂ ನಿಶಾಂಗನೆಯ ಬಟ್ಟಲ ಕುಂಕುಮಮಂ ಮನೋಜನ ।
ಗ್ಗಳಿಕೆಯ ಗಂಧಸಿಂಧುರದ ನೆತ್ತಿಯ ಸಿಂಧುರಮಂ ಪೊದಟ್ಟು ಪೋ
ಲ್ತಳವಿಗಳುಂಬಮಾದುದು ಸುಧಾಕರಬಿಂಬದ ರಾಗಮೇಳ್ಗೆಯಿಂ ‖ ೧೯೮
(ಲೀಲಾವತಿ, ೨–೭.)

---

[1] ದಿರ್ದ (ಖ.ಬ). [2] ಕರೀಂದ್ರ (ಅ).

ದಿಕ್ಕಾಂತಾಧರಪಲ್ಲವಕ್ಕೆ ಬಟಿಕಾ ದಿಕ್ಕಾಮಿನೀಭಾಳಪ
ಟ್ಟಕ್ಕಂ ತಾಂ ಬಟಿಕಾ ದಿಶಾಂಗನೆಯ ಕಾಶ್ಮೀರಾಂಗರಾಗೋಜ್ವಲಾ ।
ಸ್ಯಕ್ಕಾರಯ್ಯೆ ಸಮಾನವಾಗಿ ನಯನಕ್ಕಿಂಬಾಗಿ ಪೂರ್ವಾದ್ರಿಕೂ
ಟಕ್ಕೆಟ್ಟಿಂದನೊಡರ್ಚುತುಂ ಕುವಲಯಕ್ಕಾನಂದಮಂ ಚಂದ್ರಮಂ ॥ ೧೯೯

(ಪಾರ್ಶ್ವನಾಥಪುರಾಣಂ, ೧೦–೨೦.)

ಸ್ಮರಶಿಖಿಯಂ ವಿಯೋಗಿಹೃದಯಕ್ಕನುರಾಗಮನಾಗಳಾಗಳುಂ
ನೆರೆದೆಸೆದಿರ್ಪ ಕಾಮುಕಜನಾತ್ರಯಕೊರ್ಮೊದಲೀಯಲೆಂದು ಬಿ ।
ತ್ತರಿಸಿರೆ ಶಾಳ್ದುದೆಂದುದಯಶೋಣತೆ ಶೋಭೆಯನೀಯೆ ಪೂರ್ವದಿ
ಕ್ತರುಣಿಯ ಪದ್ಮರಾಗಮಣಿದರ್ಪಣದಂತೆಸೆದಂ ಸುಧಾಕರಂ ॥ ೨೦೦

(ಪಾರ್ಶ್ವನಾಥಪುರಾಣಂ, ೧೦–೨೧.)

ನನೆಯಿಂ ನೆಯ್ದಿ[1]ಲನಾಲ[1]ನೀರ್ದಳಿಪದಿಂ ಕಾಮಾಗ್ನಿಯಂ [2]ಸಂದಿಸಲ[2]
ಮನಮಂ ತಂದ ವಿಯೋಗಿಜಾಲದೆರ್ದೆಯಂ ನಟ್ಟುರ್ಚಿಯೊಳ್ [3]ಜಾ[3]ಱೆ ಬೆ ।
ಚ್ಚನೆ ಪಾಯ್ತೆಂದು ಪೋದಟ್ಟಿ ರಕ್ತಜಲದಿಂದಂ ತೊಯ್ದ ಕಂದರ್ಪದೇ
ವನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ॥ ೨೦೧

(ಲೀಲಾವತಿ, ೨–೫.)

ನೆರೆದ್ಯೆ ಸಂಜೆಯೊಳೆಂದು ಕಾಯ್ದೊ[4]ದೆದೊಡೇನಾತ್ಮಾಂ[4]ಗದೊಳ್ ರೋಹಿಣೀ
ಚರಣಾಲಕ್ತಕರಾಗಮುಚ್ಚಱಿದುದೋ ಮೇಣ್ ಕಾಮಿಗಳ್ಗೀವ ಕಾ ।
ಮರಸಂ ಪೊಣ್ಮಿದುದೋ ತಮೋಗಜದ ಕೋಡೇಱಿಂದೆ [5]ಮೇಣ್[5] ನೊಂದುದೋ
ಹರಿಣಂ ತಾನೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ॥ ೨೦೨

(ಆದಿಪುರಾಣಂ, ೧೨–೬.)

ಪುರುಡಿಂ ಕಾಯ್ದೊದೆಯಲ್ಕೆ ರೋಹಿಣಿಯ ಪಾದಾಲಕ್ತಕಂ ಮೆಯ್ಯನಾ
ವರಿಸಿತ್ತೋ ನಿಕಟಾಬ್ಧಿ ವಿದ್ರುಮ ಮಯೂಖಂ ತಳ್ತುದೋ ಪೂರ್ವಭೂ ।
ಧರಸಿಂಹಂ ಪೊಯೆ ನೊಂದುದೋ ಹರಿಣನೆಂಬಂತಾಗಳತ್ಯುಕ್ತ ಸೌಂ
ದರಮಾಗಿರ್ದುದು ಕಣ್ಗೆ ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ॥ ೨೦೩

ಶೋಣತೆವೆತ್ತು ಮರೀಚಿ
ಶ್ರೇಣಿಯ ಕೆಂದಳಿರನಗ್ರದೊಳ್ ತಳೆದುದಯ ।

---

[1] ಲೆ ನಾಱಿ (ಕ.ಖ.ಬ). [2] ಮಗ್ಗಿಸಲ್ (ಅ). [3] ಗಾ (ಅ). [4] ದೆಯುಲಾತನ್ನಂ (ಖ.ಬ). [5] ಮೇಂ (ಅ).

ಕ್ಷೋಣೀಧ್ರಮೆಂಬ ಕಳಶದ
ಮಾಣಿಕಗನ್ನಡಿವೊಲಾಯ್ತು ಹಿಮಕರಬಿಂಬಂ ॥ ೨೦೪

(ಜಗನ್ನಾಥವಿಜಯಂ, ೧೬–೧೦೫.)

ಅಲೆದಮೃತದೊಡನೆ ತಾರಾ
ಲಲನೆಯರಡಿದಳಿರನೂಡಲೆಂದು ಪದಂಗೆ ।
ಯ್ದು ಲತಗೆಯ ಪಡಲದಂತೆವೊ
ಲಲೆದುದು ಪರಿಪಕ್ವ[1]ರಾಗದಿ[1]ಂ ವಿಧುಬಿಂಬಂ ॥ ೨೦೫

(ಲೀಲಾವತಿ, ೨–೮.)

ಪುದಿದಿರೆ ಪ[2]ಣ್ತೀವಿದ[2] ಬಿಂ
ಬದಾಲದಿಂ ಪಣ್ಗಳುದಿರ್ದುವೆನೆ ಸೊಗಯಿಸಿದ ।
ತ್ತುದಯದೊಳೊದವಿದ ಕೆಂಪಿಂ
ಪುದಿದೊಪ್ಪುವ ತಾರಕೋತ್ಕರಂ ಕೆಲಗೆಲದೊಳ್ ॥ ೨೦೬

(ಚಂದ್ರಪ್ರಭಪುರಾಣಂ, ೮-೨೮.)

ಅದು ಪೊಸಪವಳದ ಬಂಧೂ
ಕದ ಕೆಂದಾವರೆಯ ದಾಸಳದ ಪೂವಿನ ಬ ।
ಣ್ಣದ ಸಂಪದಮಂ ಮುದದಿಂ
ಪದೆದಂದೊಪ್ಪಿತ್ತು ಚಂದ್ರಬಿಂಬವಿಡಂಬಂ ॥ ೨೦೭

(ಗಿರಿಜಾಕಲ್ಯಾಣಂ, ೪–೯೯.)

ಇದು ವಿರಹ ವಾರ್ಧಿಮಧ್ಯ
ಪ್ರದೇಶದಿಂದೊಗೆದ ರಾಗವಡಬಾನಳಪಿಂ ।
ಡದವೋಲ್ವಿರಹಿಗೆ ತೋಱಿ
ತ್ತುದಯಾದ್ರಿಯ ಮೇಲೆ ಮೆಱೆವ ಹಿಮಕರಬಿಂಬಂ ॥ ೨೦೮

(ಗಿರಿಜಾಕಲ್ಯಾಣಂ, ೪–೧೦೦.)

ಇದು ಮಾಹೇಂದ್ರೀಲತಾಕೋರಕಮಮರಹರಿದ್ವಲ್ಲರೀಪಲ್ಲವಂ ಪೂ
ರ್ವದಿಶಾವಲ್ಲೀಫಲಂ ತಾನೆನೆ ತರತರದಿಂದೇೞ್ಗೆ ಕಣ್ಗೊಡ್ಡಮಪ್ಪಂ ।
ತುದಯಂಗೆಯ್ದುತ್ತು ಸಂಧ್ಯಾರುಣರುಚಿರುಚಿರಂ ಕಾಮಸಾಮ್ರಾಜ್ಯಲಕ್ಷ್ಮೀ
ಮದಲೀಲಾಲಂಬಮುಜ್ಜೃಂಭಿತ ಕುಮುದಕದಂಬಂ ಸುಧಾಸೂತಿಬಿಂಬಂ ॥೨೦೯

(ಮಲ್ಲಿನಾಥಪುರಾಣಂ, ೭–೨೮.)

---

[1] ಬಿಂಬಮಂ (ಅ). [2] ಣ್ತಿಂದುವ (ಅ).

ಉದಯೋರ್ವೀಧರಕುಂಕುಮೋದ್ಗಮರಜಂ ಪಾಯ್ವಂತೆ ಕೆಂಪೇೞೆ ಪೂ
ರ್ವದಿಶಾಕನ್ಯೆಯ ತೋಳೊಳಿರ್ದರಿಸಿನಂ ತಳ್ತಂತೆ ಪೊಂಬಣ್ಣವೇ ।
ೞೆ ದಿವೌಕಃಪ್ಲವದೊಳ್ ಮುೞುಂಗಿ ತೊಳೆದೇೞ್ವಂತೆಯ್ದೆ ಬೆಳ್ಪೇೞೆ ತ
ತ್ತ್ವದ್ಧ್ಯಾಭ್ಯಾಸಿಯ ಚಿತ್ತದಂತೆ ತಿಳಿದಂ ತಾರಾಮನೋವಲ್ಲಭಂ ॥ ೨೧೦

(ಅನಂತನಾಥಪುರಾಣಂ, ೭–೮೩.)

ತೊರೆದುದು ಚಂದ್ರಕಾಂತಮಣಿವಕ್ಕಿಗಳಪ್ಪ ಸಡಿಲ್ದುವಿಂಗಡಲ್
ತೆರೆ ಮಸಗಿತ್ತು ಮಿರ್ದುವೊಗೆತಂದುದು ಚಂದ್ರಿಕೆ ಕೂಡೆ ಮೀನ್ಗಳಂ ।
ಕುರಿಸಿದುವುತ್ಪಲಂ ನಗುತುಮಿರ್ದುವು ಕಣ್ಮುಗಿದಬ್ಜಮುಂ ತಮಂ
ಪರೆದುದು ಮನ್ಮಥಂ ನಲಿದು ನರ್ತಿಸಿದಂ ಶಶಿ ಬರ್ಪ ಪೊತ್ತಿನೊಳ್ ॥ ೨೧೧

ಒಸೞಿಲ್ಕಿರ್ದುದು ಚಂದ್ರಕಾಂತಮುರಲಲ್ಕಿರ್ದತ್ತು ಮುಗ್ಧೋತ್ಪಲ
ಪ್ರಸರಂ ಜಾದಿನ ಬಣ್ಣವಪ್ಪ ಬೆಳಗಂ ಕೈಕೊಳ್ಳೆ ಪೂರ್ವಾಸೆಯು ।
ದ್ದೆಸೆಯಂ ಕಂಡದಿದಿರ್ದರದಿರ್ದುವು ಚಕೋರಂ ಪಾಲ್ಗಡಲ್ಮೋರೆಯಂ
ಮಿಸುಗಲ್ಕಿರ್ದುದು ಮೂಡಲಿರ್ದ ಪದದೊಳ್ ತಾರಾಮನೋವಲ್ಲಭಂ ॥ ೨೧೨

ಸಂಗಡಿಸೆ ತನ್ನೊಳರುಣಪ
ತಂಗಸಿತದ್ಯುತಿಗಳೆಂಬನುಕ್ರಮರುಚಿ ಶ ।
ಕ್ರಂಗೆತ್ತಿದ ಮಾಣಿಕಗೊಡೆ
ಪೊಂಗೊಡೆ ಬೆಳ್ಗೊಡೆಗಳೆನಿಸಿದುದು ವಿಧುಬಿಂಬಂ ॥ ೨೧೩

(ಜಗನ್ನಾಥವಿಜಯಂ, ೧೬–೧೦೬.)

ಶಿರದೊಳ್ ತಾರಾ[1]ಕಪೋಲಂ[1] ಪೊಳೆಯೆ ಕರಜಟಾಜೂಟಮಿಂಬಾಗೆ ಜೊನ್ನಂ
ಸುರಸಿಂಧುಸ್ರೋತಮಂ ಪೋಲ್ತಿರೆ ತೊಲಗೆ ತಮೋರಾಕ್ಷಸಂ ಚರ್ಮಚಿತ್ರಾಂ ।
ಬರ[2]ಬಂಧಂ[2] ಕೂಡೆ ಕಾಮಂ ಕರಮುರಿವಿನೆಗಂ ಮಂಡಲಂಗೊಂಡು ಪರ್ವು
ತ್ತಿರೆ ಸಂಧ್ಯಾರಾಗನೇತ್ರಾನಲನುದಯಿಸಿದಂ ಚಂದ್ರಚಂದ್ರಾರ್ಧ[3]ಜೂಟಂ[3] ॥೨೧೪

(ಲೀಲಾವತಿ ೧೦-೩೨.)

ಕುವಲಯದೀರ್ಘನೇತ್ರಮಲರುತ್ತಿರೆ ಮೂಡುವ ಮೀನ್ಗಳಾಕೆಯೊ
ಪ್ಪುವ ಮುಖಪದ್ಮದೊಳ್ ಮೊಡವಿ ಮೂಡಿದವೋಲಿರೆ ಕಾಲಮೆಂಬ ಶಂ ।
ಭುವಿನ ಶರೀರದೊಳ್ ಪುದಿದ ಗೌರಿಗೆ ರಾಗಮನೊಡ್ಡಿಕೊಂಡು ಮೂ
ಡುವ ಮೊಲೆಯಂತೆ ಮೂಡಿದುದು ಮೂಡಣದಿಕ್ಕಿನೊಳಿಂದುಮಂಡಲಂ ॥ ೨೧೫

(ಲೀಲಾವತಿ, ೨–೩.)

---

1 ಕಳಾಪಂ (ಅ), ಕಪಾಲಂ (ಬ). 2 ಖಂಡಂ (ಏ.ಗ.ಬ). 3 ಚೂಡಂ (ಅ).

ಸೋಂಕಲೊಡಂ ನಿಶಾತರುಣಿಯಂ ಶಶಿ [1]ಪೋದುದು[1] ಸಂಜೆ ಸೀರೆವೋಲ್
ಪಂಕಜಲೋಚನಂ ಮುಗಿದುವೆಟ್ಟುವು ಬಲ್ಚಿಮರಂತೆ ತಾರಕಾ ।
ಸಂಕುಳಮಿಂದುಕಾಂತವಿತತಾಚಳ ತುಂಗ ನಿತಂಬ ಬಿಂಬದಿಂ
ದಂ ಕೊಳನಾಗಿ ಸೂಸಿದುವು ತೆಳ್ವದದಂತೆ ನವದ್ರವಾಂಬುಗಳ್ ॥ ೨೧೬

(ಲೀಲಾವತಿ, ೨-೪.)

ನನೆಯಂಬಂ ಮದವೇಱೆ ಕೈರವಕುಳಂ ಸೀರೇಱೆ ಕಾಮಾರ್ಥಿಯ
ಪ್ಪನ ಜೀವಂ ನಡುನೆತ್ತಿಗೇಱೆ ಖರದಂಡಶ್ರೀಗೆ ಕರ್ಪೇಱೆ ಕಾ ।
ಮಿನಿಯರ್ ಸಂತಸದುಯ್ಯಲೇಱೆ ನೆಲೆಯಿಂದಂಭೋಧಿ ಮಿಕ್ಕೇಱೆ ಭೋಂ
ಕನೆ ಬಂದೇಱಿದನಲ್ತೆ ವಾಸವದಿಶಾಶೈಲೇಂದ್ರಮಂ ಚಂದ್ರಮಂ ॥ ೨೧೭

ವಿದಳತ್ಕೈರವರಾಜಿ ರಾಜಬಲದಿಂ ಸಂತೋಷಮಂ ಮುಟ್ಟೆ ಸ
ನ್ಮದಮಂ ತಾವರೆಯೆತ್ತಿ ಕಟ್ಟೆ ತಮಮಂ ಶೀತಾಂಶುವೆಟ್ಟಟ್ಟೆ ಪೆ ।
ರ್ಚಿದಗುರ್ವಿಂ ವಿರಹಾಳಿಯಂ ಕುಸುಮಬಾಣಂ ಕಾಯ್ದು ಬೆನ್ನಟ್ಟೆ ಮೆ
ಟ್ಟಿದನಿಂದ್ರಾಚಲಚೂಡಮಂ ಕಿರಣವೀಧೀಸಾಂದ್ರಮಂ ಚಂದ್ರಮಂ ॥ ೨೧೮

(ಗಿರಿಜಾಕಲ್ಯಾಣಂ, ೪-೯೮.)

ತಿಮಿರಾತ್ಮದ್ಯುತಿ ಕರ್ಪುದೋರ್ಪ ತಿಲಕಂ ತಾರಾಗಣಂ ಬಂದು ನೋ
ಡುವ ಯೂಥಂ ಮಧು ಶೆತ್ತಿಗಂ ವಿರಹಿ ಮಾಱಂಕಂ ನೃಪಂ ಚಿತ್ತಸಂ ।
ಭವನಾಗಲ್ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೇಱಿದಂ
ನವಸಂಧ್ಯಾಸುವಿಭಾಸಿ ವಾಸವದಿಶಾಶೈಲೇಂದ್ರಮಂ ಚಂದ್ರಮಂ ॥ ೨೧೯

ನಿನದತ್ಸಂಧ್ಯಾನಕಂ ನಿಗ್ಗವಣೆಯ ಪಱೆ ಪೂರ್ವಾಚಲಂ ತುಂಗ ರಂಗಂ
ತನಗಾದತ್ತಂಬಿನಂ ನೀಲಿಯ ಜವನಿಕೆವೋಲ್ ಪಿಂಗೆ ಸಂಧ್ಯಾತಮಂ ಮೆ ।
ಲ್ಲನೆ ತಾರಾನೀಕಪುಷ್ಪಾಂಜಳಿಯನೆಸೆವಿನಂ ಸೂಸಿ ತತ್ಪೂರ್ವ ರಂಗ
ಕ್ಕನುಗೈವುದ್ಯನ್ನಿಶಾನರ್ತಕಿಯ ವದನದಂತಿಂದು ಕಣ್ಗೊಡ್ಡಮಾದಂ ॥ ೨೨೦

(ಚಂದ್ರಪ್ರಭಪುರಾಣಂ, ೮-೩೦.)

ಮುದದಿಂ ತಂದಿಕ್ಕೆ ಪೂರ್ವಾಂಗನೆ ಗಿರಿಶಿರದೊಳ್ ಪೀಠಮಂ ಸತ್ತ್ವಭಾಸಂ
ಪದಮಂ ಕೈಗೊಟ್ಟು ಚೈತ್ರಂ ನಡೆತರೆ ಮದನಂ ಪುಷ್ಪಬಾಣಂಗಳಂ ಪೂ ।
ಡಿದ ಬಿಲ್ಲಂ ಪೇತ್ತು ಪಿಂತಂ ಬರೆ ನವ ಕುಮುದಾಮೋದ ಮಾಧುರ್ಯದಿಂ ಷ
ಟ್ಪದಗಾನಂ ಪೊಣ್ಮಿಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ ॥

(ಗಿರಿಜಾಕಲ್ಯಾಣಂ, ೪-೯೭.)

---

[1] ಸೋರ್ದುದು (ಅ).

ಗಗನಮಹಾಂಬುರಾಶಿಯೊಳಗೊಯ್ಯನೆ ಕೊರ್ಬಿದ ಮುತ್ತು ಸುತ್ತಲುಂ
ಸೊಗಯಿಪ ಕೌಮುದೀಲತೆಯ ಬಿತ್ತು ವಿಧುಂತುದನುಂಬ ತುತ್ತು ಕಾ ।
ಮಿಗಳನನಂಗನಾಜ್ಞೆಯೊಳೆ ಪ್ಲೋಷಿಸಿದೋಲೆಯ ಸುತ್ತು ನೋಡೆಪ್ಪೊಡಂ
ಬಗೆಗೊಳಿಸಿತ್ತು ವಾಸವದಿಶಾನನಕುಂಡಲಮಿಂದುಮಂಡಲಂ ॥ ೨೨೨

ಕರಮೆಸೆಯಿತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ
ತ್ಕರದ ವಿಪತ್ತು ತಾರೆಗಳ ತುತ್ತು ಸುಧಾಂಬುಧಿಯೊತ್ತು ಜಾರ ಸೌಂ ।
ದರಿಯರ ಮಿತ್ತುವಂಬರ ಪುಳಿಂದಿಯ ಮೂಗಿನ ಮುತ್ತು ನೋಡಲ
ಚ್ಚರಿಯೆನಿಸಿತ್ತು ಮೂಡದೆಸೆಯಿಂದೆಸೆಯಿತ್ತು ಹಿಮಾಂಶು ಮಂಡಲಂ ॥ ೨೨೩

(ಗಿರಿಜಾಕಲ್ಯಾಣಂ, ೪–೯೬.)

ಮದನನ ನಚ್ಚು ವಾರಿಧಿಯ ಪೆರ್ಚು ವಿಯೋಗಿಯ ಕಿಚ್ಚು ಕೈರವಾ
ಭ್ಯುದಯದರಲ್ಚು ನೀರಜದ ಮುಚ್ಚು ರಥಾಂಗದಗಲ್ಚು ಜಾರೆಯ ।
ಗೊರ್ದವಿದ ಬೆಚ್ಚು ಕಟ್ಟಲೆ ಕಟಲ್ಚು ಜಗತ್ತಿನ ಪುಣ್ಯದಚ್ಚು ಬಂ
ದುದಯಗಿರೀಂದ್ರಮಸ್ತಕದೊಳಿರ್ದುದು ಪೂರ್ಣಶಶಾಂಕಮಂಡಲಂ ॥ ೨೨೪

ನೆರೆದೆತ್ತಂ ಭಗಣಂ ನಿರೀಕ್ಷಿಸೆ ಬೆಸಂಬೆತ್ತೇ[1]ಱಿ[1] ಚಿತ್ತೋದ್ಭವಂ
ಬರೆ ಲಕ್ಷ್ಮಚ್ಛಲದಿಂದಮಬ್ದಪಥವೀಧೀಭಾಗದೊಳ್ ಬೇಗವೋ ।
ತ್ತರಿಸುತ್ತುಂ ಪರಿಕಾಱಿನಂ ತಿಮಿರ[2]ನಂ[2] ಬೆನ್ನಟ್ಟಿ ಪಾದಂಗಳಿಂ
ದೊರಸಿತ್ತೇನತಿ[3]ರೌದ್ರ[3]ಮೋ ವಿಧುಮದೋನ್ಮತ್ತೇಭವಿಕ್ರೀಡಿತಂ ॥ ೨೨೫

(ಚಂದ್ರಪ್ರಭಪುರಾಣಂ, ೮–೩೩.)

ರಜನೀಕಾಂತಾಪಯೋಭೃತ್ತಟಮಲಯಜಪತ್ರಂ ಮನೋಜಾಂಗನಾಶು
ಕ್ತಜಚಂಚತ್ಕರ್ಣಪತ್ರಂ ಸ್ಮರನೃಪವರಶುಭ್ರಾತಪತ್ರಂ ವಿ[4]ಯನ್ನೀ[4] ।
ರಜಿನೀಮಧ್ಯೋಲ್ಲಸತ್ಪಾಂಡುರತರಶತಪತ್ರಂ ಬೆಡಂಗಾಯ್ತು ಯುಕ್ತ
ವ್ರಜಗರ್ವೋರ್ವೀಧ್ರಶಂಬಂ ನಯನಸುಖಲತಾಸ್ತಂಭಮಾತ್ರೇಯಬಿಂಬಂ ॥

(ಚಂದ್ರಪ್ರಭಪುರಾಣಂ, ೮–೩೪.)

ದಿವಿಜಾಶಾಗಿರಿಕೂಟಕೇಸರಿ ವಿಯನ್ಮಂದಾಕಿನೀಹಂಸೆ ಮಾ ।
ನವತೀಲೋಚನಬಾಣಚಂದ್ರಿಕೆ ಚಕೋರೀಪಾನಲೀಲಾಮೃತಾ ।
ಪ್ಲವಕಾಸಾರಮನಂಗಮಂಗಲವಧೂಟೀದರ್ಪಣಂ ತಾನಿದೆಂ
ಬ ವಿಲಾಸಕ್ಕೆ ನಿವಾಸಮಾಯ್ತುದಯದೊಳ್ ಪೀಯೂಷರುಙ್ಮಂಡಲಂ ॥ ೨೨೬

(ಅನಂತನಾಥಪುರಾಣಂ, ೭–೮೨.)

---

[1] ಱು (ಅ). [2] ಮಂ (ಅ). [3] ಚೋದ್ಯ (ಅ). [4] ಯೋಗೀ (ಖ.ಬ).

ಕಾಡೆ ಮನೋಭವಂ ವಿರಹಿಯಂ ಸಕಲೋರ್ವಿ ಸುಧಾಂಶುವಿಂದೆ ತೇಂ
ಕಾಡೆ ಚಕೋರಮುಂ ಯುವತಿಲೋಚನ ಕೈರವಮುಂ ಪ್ರಮೋದಮಂ ।
ಮಾಡೆ ಶಶಾಂಕಕಾಂತಮಣಿಭಿತ್ತಿಗಳಂತೆ ದಿಶಾರಭಿತ್ತಿಗಳ್
ಕೂಡೆ ವಿಚಾರಿಸುತ್ತೆ ನೆಱೆ ಕಣ್ಗೆಸೆದಿತ್ತಮೃತಾಂಶುಮಂಡಲಂ ॥ ೨೨೮

(ಪಾರ್ಶ್ವನಾಥಪುರಾಣಂ, ೧೦-೩೧.)

ಕುಮುದವಿಲಾಸಹಾಸಪರಿಹಾಸಕನಬ್ಧಿಜಲಪ್ರವರ್ಧನೋ
ದ್ಯಮಿ ನಳಿನೀಪ್ರಮೋದಪರಿಹಾರವಿಶಾರದನುತ್ಕಕೋಕದು ।
ರ್ದಮವಿರಹಕ್ರಿಯಾವ್ಯಸನಿ ಚಾರುಚಕೋರವಿದೂರಪಾರಣ
ಕ್ಷಮನವವಲ್ಲಭಂ ಬೆಳಗಿದಂ ಪುರವೊಂದೆನೆ ಲೋಕಮೆಲ್ಲಮಂ ॥ ೨೨೯

(ಚಂದ್ರಪ್ರಭಪುರಾಣಂ, ೮-೩೫.)

ಜಗದಾಲೋಕನದರ್ಪಣಂ ಪ್ರಥಮದಿಕ್ಕಾಂತಾನನಂ ಕಂತುರಾ ।
ಜಗಜೋದ್ದೀಪನಪಿಂಡಮಂಬರಸರಸ್ಯುತ್ತಂಸ[1]ಹಂಸಂ[1] ವಿಯೋ ।
ಗಿಗಣಾಕೂತಕುರಂಗಪ್ರೋತಭಯಭೃತ್ಕಂಠೀರವಂ ಚೆಲ್ವುವೆ
ತ್ತೊಗೆದತ್ತರ್ಣವವೀಚಿನರ್ತನನಟಂ ಬಿಂಬಂ ಸುಧಾಸೂತಿಯಾ ॥ ೨೩೦

(ಅಜಿತನಾಥಪುರಾಣಂ, ೬-೪೨.)

ಮನಸಿಜನಿಟ್ಟ ಚಂದನದ ಬೊಟ್ಟು ರತೀಶನ ಜೀವದಂಚೆ ಕಾ
ಮನ ಧವಳಾತಪತ್ರವಸಮಾಸ್ತ್ರನ ಭಾಸುರಚಕ್ರವಿಕ್ಷುಚಾ ।
ಪನ ಶಶಿಕಾಂತದರ್ಪಣವನಂಗನ ಮುತ್ತಿನ ಚೆಂಡು ಪುಷ್ಪಧ
ನ್ವನ ಕೃತಪುಣ್ಯಪುಂಜಮೆನೆ ಕಣ್ಗೆಸೆದಿರ್ದುದು ಚಂದ್ರಮಂಡಲಂ ॥ ೨೩೧

ಕರಿಯಂದಂ ಕಾಮನಂದಂ ಕಮಲಭವನೆಯಂದಂ ಖರಕ್ರೂರನಂದಂ
ಗಿರಿಯಂದಂ ಗೋತ್ರನಂದಂ ಗಿರಿಸುತೆವರನಂದಂ ಸರಿದ್ರಾಜನಂದಂ ।
ಶರದಂದಂ ಶಕ್ರನಂದಂ ಶಬರಿನಿಕರದಂದಂ ಮರುಚ್ಚಾಪದಂದಂ
ಸುರರಂದಂ ಪುಷ್ಪದಂತಂಬರವಳಯದೊಳೊಪ್ಪಿರ್ದುದಾ ಚಂದ್ರಬಿಂಬಂ ? ॥ ೨೩೨

[2]ಸಮುದಂ ಸದ್ಗ್ರಹ[2] ಷಡ್ಜಷಟ್ಚರಣ ಮಂದ್ರನ್ಯಾಸಮುತ್ಕೀರಮು
ಧ್ಯಮತಾರಂ ಮೃದುತಾಡಿತೌಡವನವೋದ್ಭಿನ್ನಪ್ರಸೂನಂ ಸಮಂ ।
ಚಮು[3]ಚಂ[3]ಚತ್ಕಳಕಂಠಕಂಪಿತರುತಂ ತಾನೆಂಬ ಹಿಂದೋಳ ರಾ
ಗಮೆ ತಾನಾದ ವಸಂತಮೇನೆಸೆದುದೋ ಸಂಪೂರ್ಣ [4]ಸೋಮೋ[4]ದಯಂ ॥ ೨೩೩

(ಲೀಲಾವತಿ, ೨-೩೨.)

---

[1] ಹಸ್ರಂ (ಬ). [2] ಸಮುದಂಚದ್ಗ್ರಹ, (ಅ). [3] ಸಿಂ (ಖ.ಬ). [4] ಚಂದ್ರೋ (ಖ.ಬ).

ಇನನಸ್ತಂಗತನಾಗೆ ಪಾಣ್ಬರಿಪು ಪುಷ್ಪಾಕಾರದಿಂ ರಾಗದಿಂ
ವನಜಾತಂಗಳ ಮೇಲೆ ಕಯ್ಯನಿಡೆ ಶೀತಂ ಪೋಣ್ಮೆ ಸಂಕೋಚಿತಾ ।
ನನಮಾಗಿರ್ದೊಡೆ ನೆಯ್ದಿಲೆಯ್ದೆ ನಗುತಂ ಕೇಳ್ ಭಾವ ನೀನೇಕೆ ಪ
ದ್ಮಿನಿಯೇಕೆಂದೊಡೆ ಬೆಳ್ಪನಾ[1][ಯ್ತು][1] ಮೊಗಮೆಂಬಂತಿರ್ದನಾ ಚಂದ್ರಮಂ॥೨೩೪

ಕರುಣಂ ಚಕ್ರಕ್ಕೆ ಹಾಸ್ಯಂ ಕುವಲಯಕೆ ಭಯಂ ಜಾರೆಯರ್ಗದ್ಭುತಂ ಸಾ
ಗರಕಂ ಬೀಭತ್ಸ ನಕ್ತಂಚರವರತರುಣೀರಕ್ತಪಾನಕ್ಕೆ ವೀರಂ ।
ಸ್ಮರಭೂಪಾಲಂಗೆ ರೌದ್ರಂ ವಿರಹತತಿಗೆ ಶಾಂತಂ ಚಕೋರಕ್ಕೆ ಶೃಂಗಾ
ರರಸಂ ಕಾಂತಾಜನಕ್ಕಾಗಿರೆ ನವರಸಮಂ ಬೀಱುತಿರ್ದಂ ಶಶಾಂಕಂ ॥ ೨೩೫

ದೆಸೆಯಂ ಬಾಸಣಿಸುತ್ತೆ ಬೆಳ್ಗದಿರಿನಿಂ ಪಣ್ಯಾಂಗನಾವೀಧಿಯೊಳ್
ಕುಸುಮಾಸ್ತ್ರಾಸನಮಂ ಕೆದರ್ದು ಮದನಂ [2]ವಿ[2][ೀ]ಯೋಗಿಬೃಂದಂಗ[3]ಳೇಂ[3] ।
ದೆಸೆಗೆಟ್ಟೋಡುವ ಮಾಟ್ಕೆಯಿಂದೆಸೆಯುತುಂ ತಾರಾಳಿದೀಪಂಗಳಿಂ
ಹಸನಾಯಿತ್ತು ಪುರಂ ಗೃಹಾಂಗನೆಯರಿಂ ಚಂದ್ರೋದಯಾನಂದದೊಳ್ ? ॥ ೨೩೬

ಪರೆದಿರೆ ತಿಮಿರಕಚಂ ನೆರೆ
ದಿರೆ ಭಗಣಸ್ವೇದಜಲಕಣೌಘಂ ರಾಗಂ ।
ಬೊರೆದಿರೆ ಚಕೋರನಯನಂ
ಕರಮೆಸೆದಳ್ ನೆರೆದು ರಜನಿ ರಜನೀಪತಿಯೊಳ್ ॥ ೨೩೭

(ಚಂದ್ರಪ್ರಭಪುರಾಣಂ, ೮–೩೨.)

ತಾರಕಿಗಳರಸನಮೃತದ
ಸಾರೋದಯನಲರ ನೀಱನಿರುಳಿನ ನಲ್ಲಂ ।
ಜಾರೆಯರ ಮಿತ್ತು ಚೋರರ
ನಾರೈವ ತಳಾಱಚಂದ್ರನುದಯಂಗೆಯ್ದಂ ॥ ೨೩೮

ಇರುಳ ಸಿರಿ ಸಿರಿಯ ಮೆಯ್ಸಿರಿ
ವಿರಹಿಗಳುರಿ ಕಮಲದರಿ ಮನೋಜನ ಕರಿ ಪಾ ।
ಣ್ಬರ ದಳ್ಳುರಿ ತಣ್ಗದಿರ್ಗಳ
ಹರವರಿ ತಾರಾಧಿನಾಥನುದಯಂಗೆಯ್ದಂ ॥ ೨೩೯

ನೆಯ್ದಿಲ್ ವಿಕಾಸಲಕ್ಷ್ಮಿಯ
ನೆಯ್ದಲ್ ತಳಿರ್ಗೆಂಪನಾಂತು ಮೂಡಣ ದೆಸೆ ಚೆ ।

---

[1] ಯ್ದು (ಖ.ಬ). [2] ವಿ (ಖ.ಬ). [3] ಳಂ (ಬ).

ನ್ನೆಯ್ದಲ್ ವಿರಹಿಯನಂಗಜ
ನೆಯ್ದಲ್ ನೆಯ್ದಿಲಸಹಾಯನುದಯಂಗೆಯ್ದಂ ॥ ೨೪೦

ಶೃಂಗಾರದುರುಳಿ ಜನಧೃತಿ
ರಂಗಂ ಪಂಕಜದ ವೈರಿ ನೆಯ್ದಿಲ್ಗೆಳೆಯಂ ।
ಗಂಗಾಧರನ ಜಟಾಗ್ರದ
ಭೃಂಗಂ ಸಂಪೂರ್ಣಚಂದ್ರನುದಯಂಗೆಯ್ದಂ ॥ ೨೪೧

ಕಡಲಂ ಸುರಾಸುರರ್ ಕಡೆ
ವೆಡೆಯೊಳ್[1]ಪಾಲ್ದೆ[1]ರೆಗಳೊಳಗೆ ಪುಟ್ಟಿದ ಚೆಲ್ವಿಂ ।
ಗೆಡೆಗೊಂಡು ನಿಱಿಮುಗಿಲ್ಗಳ
ನಡುವೆ ಕರಂ ಮಿಱುಗಿದತ್ತು ಹಿಮಕರಬಿಂಬಂ ॥ ೨೪೨
(ಜಗನ್ನಾಥವಿಜಯಂ, ೪-೭೩.)

ಚಂದ್ರಿಕೆ ಸುರವರಕರಿಯೆನೆ
ಚಂದ್ರಂ ತತ್ಕರಿಯ ಕುಂಭಮೆನೆ ತಾರಗೆಗಳ್ ।
[2]ಸಾಂ[2]ದ್ರನಯನಂಗಳೆನೆ ವಿಯ
ದಿಂದ್ರನದೇಂ ಭುವನಜನ[3]ದ ಕಣ್ಗೊಪ್ಪಿ[3]ದನೋ ॥ ೨೪೩
(ಲೀಲಾವತಿ, ೨-೧೮.)

ಉದಯಂಗೆಯ್ದೊಡೆ ಕಂಡು ಕಾಮನಿದಿರೆದ್ದಾಲಿಂಗನಂ ಮಾಡಿದಂ
ದದೆ ಚೈತ್ರಂ ತನಗಿತ್ತ ನೀಲಮಣಿಹಾರಂ ಪೇರುರಕ್ಕೇಱಿದಂ ।
ದದೆ ರಾತ್ರಿಪ್ರಿಯೆ ಸೂಡ್ಗೆವಂದು ಪದಪಿಂ ಪರ್ಯಂಕದೊಳ್ ನೆಮ್ಮಿದಂ
ದದೆ ಕಣ್ಗೀನಮೃತಾಂಜನಂ ಮೆಱೆದುದೋ ಲಕ್ಷ್ಮಂ ಮೃಗೀಲಕ್ಷ್ಮನೊಳ್ ॥ ೨೪೪
(ಅನಂತನಾಥಪುರಾಣಂ, ೭-೮೪.)

ಮೃಗಲಕ್ಷ್ಮಂ ಸಂಜೆಗೆಂಪಂ [4]ಪೊದೆ[4]ದುದಯಿಸಿ ಸರ್ವೋರ್ವಿಗಾನಂದಮಂ ವಾ
ರ್ಧಿಗೆ ಪೆರ್ಚಂ ಮಾಡಿ ಮುನ್ನಂ ಬಟಿಕೆ[5]ರ್ದೆ[5]ಗಱೆಯಂ ತೋಱಲುಂ [6]ಕಂಡರೆಲ್ಲಂ[6] ।
ಬಗೆಗೊಂಡಾಲಂ ಮೊಲಂ ಪುತ್ತೆರಳೆಯೆನುತದಂ ಕೂರ್ತು ಕೈಗೆಯ್ಯೊಳಿನ್ನುಂ
ಪೊಗೞ್ದಪ್ಪರ್ ಭಾಪು ಲೋಕಕ್ಕುಪಕರಿಸುವನೊಳ್ ದೋಷಮುಂ ಸ್ತುತ್ಯಮಲ್ತೇ ॥
(ಲೀಲಾವತಿ, ೨-೧೦.)

---

[1] ತೆರೆತೆ (ಅ). [2] ರುಂ (ಅ). [3] ಕೆ ಕಣ್ಗೊಳಿಸಿ (ಅ). [4] ಪುದಿ (ಅ).
[5] ಳೆ (ಖ,ಬ). [6] ಡು ಲೋಕಂ (ಅ).

ತಿಳಿಗೊಳನಲ್ಲಿ ತೋಱುವಸಿತೋತ್ಪಲವುಂ ಫಣಿರಾಜತಲ್ಪದೊಳ್
ತೊಳಗುವ ಕೃಷ್ಣಕಾಂತವಪುವಂ ರತಿದೇವಿಯ ಕೇಳಿಗಿಟ್ಟನು |
ಣ್ಬಳುಕಿನ ಬಟ್ಟವಂಜರದ ಕೋಗಿಲೆಯಂ ಗೆಲೆವಂದುದಿಂದುಮಂ
ಡಳದ ಕಳಂಕ[1]ಲೇಖನವುದಿಂದ್ರ[1]ವಧೂಮುಖಪ[2]ಕ್ಷ್ಮ[2]ವಿಭ್ರಮಂ || ೨೪೬
(ಲೀಲಾವತಿ, ೨–೧೧.)

ಇದು ಹರಿಣಂ ದಿಟಂ ಹರಿಣನಲ್ತು ಮೊಲಂ ಮೊಲನಲ್ತದಾಲವಾ
ಲದ ಮರನಲ್ತು ಪುತ್ತುಗಳೆ ಪುತ್ತುಮಿದಲ್ತೆನುತಿರ್ಪ ಮೂಢರೋ |
ಕದ ಪಡೆಮಾತದಿರ್ಕೆ ನೆವಮಿಟ್ಟು ಕೊಲಲ್ ಮದನಂ ವಿಯೋಗಿಗೊ
ಡ್ಡಿದ ಘಟಸರ್ಪನೆಂದು ಬಗೆಯಿಂ ಹಿಮದೀಧಿತಿಹೃತ್ಕಳಂಕಮಂ || ೨೪೭

ಮುನಿದೀಶಂ ಸಲೆ ಸುಟ್ಟುಮುಂ ಕರುಣದಿಂದಿತ್ತಂ ಪುನರ್ಜನ್ಮಮಂ |
ನಿನಗೆಂದಾ [3]ರತಿ[3] ಪಾಪಮುಂ ಪಡಣಮುಂ ಪೋಕೆಂದು ಕಾಮಂಗೆ ಮ
ಜ್ಜನಕೆಂದೆತ್ತಿದ ಚಂದ್ರಕಾಂತಘಟ[4]ದಿ[4]ಂ ತಂದ[5]ಟ್ಕುೞಿಂ[5] ಪುಷ್ಪವಾ
ಸನೆಗೆಂದಿಕ್ಕಿದ ನೀಲ ನೀರರುಹಮಂ ಪೋಲ್ದತ್ತು ಕರ್ಪಿಂದುವಾ || ೨೪೮
(ಪಂಪಭಾರತಂ, ೪–೫೧.)

ತಿಂಗಳ ಬಿತ್ತೆನಿಸುವ ಬೆ
ಳ್ದಿಂಗಳ್ ಪಾಲ್ಗಡಲನಿಟಿಪೆ ಮಂಗಳಶೇಷೋ |
ತ್ತುಂಗಶಯನೀಯದಾ ಕೃ
ಷ್ಣಾಂಗಕರದ್ಯುತಿವೊಲೆಸೆದುದಿಂದುಕಳಂಕಂ || ೨೪೯

ಕಾಮನ ದೀಹದ ಹರಿಣಂ
ಕಾಮೋರಗನಿರ್ಪ ಪುತ್ತು ಮೊಲಗಟ್ಟಲೆಯಂ |
ಕಾಮಿಗೆ ಪುಟ್ಟಿಸುವ ಮೊಲಂ
ಕಾಮಗ್ರಹದಾಲಮೆನಿಸಿತಿಂದುಕಳಂಕಂ || ೨೫೦
(ಮಲ್ಲಿನಾಥಪುರಾಣಂ, ೭–೩೬.)

ಪುತ್ತಿನೊಳಿರ್ದ ನಾಗರ ಫಣಾಮಣಿರಶ್ಮಿಯೊ ರಾಹುದಂತಮೇಂ
ಪತ್ತಿತೊ ಕೊಂಬಿನಿಂ ಹರಿಣನೊತ್ತಿತೊ ಸಾನುಪುಳಿಂದನಿಂದಲೇಱಿ |
ಪತ್ತಿತೊ ಮೇಣ್ ಶಶಂ ವಟಮಹೀಜಮೆ ಪಣ್ತುದೊ ಪೇಪೆನಲ್ಕೆ ಮೆ
ಯ್ವೆತ್ತ ಕಳಂಕನೀಲರುಚಿಯಿಂದೆಸೆದಿರ್ದುದು ಚಂದ್ರಮಂಡಲಂ || ೨೫೧

[1] ರೇಖೆಯುಮರೇಂದ್ರ (ಅ). [2] ತ್ರ (ಅ). [3] ದತಿ (ಅ). [4] ದೊಳ್ (ಅ).
[5] ಟ್ಟಿಯೊಳ್ (ಅ).

ಮುಂದೆ ತಮಂಧವಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ
ಮುಂದುಗೊಳುತ್ತಮೆನ್ನನಿದು ಮಾಡುವ ಮಾಟ್ಕೆಯನಿಂದು ನೋಱ್ಪೆನಾ ।
ನೆಂದು ತದೀಯ ರೂಪನುಱಿ ನುಂಗೆ ತನುಚ್ಛವಿಯಿಂದೆ ತೋಱಿತೆಂ
ಬಂದದೊಳೊಪ್ಪುತಿರ್ದುದು ನಿಶಾಕರಮಂಡಲದಲ್ಲಿ ಲಾಂಛನಂ ॥ ೨೫೨

ಪಸಿದ ಚಕೋರಿಗಳ್ ದ್ವಿಜಶರೀರಗಳೆಂದೆಱೆಯಲ್ಕೆ ಸಂಜೆ ಭಾ
ವಿಸೆ ಪೊಸ ಜೊನ್ನಮಂ ಶಶಿಯ ಕಪ್ಪಿನಿತಿಲ್ಲದ ಮಾಟ್ಕೆಯಿಂದೆ ಶೋ ।
ಧಿಸಲದು ಶುದ್ಧವಾಗೆ ಬಟಿಯಂ ಸದಕಿಕ್ಕಿದ ಧಾರೆವಟ್ಟಲಂ
ಪಸಿಗಿರಿಸಿಟ್ಟವೋಲ್ ಮೃದುಕಳಂಕದಿನೊಪ್ಪಿದುದಿಂದುಮಂಡಲಂ ॥ ೨೫೩

ಮದನನ ರತ್ನದರ್ಪಣದ ಮಾರ್ಪೊಳೆಪಂಗಜಕಾಮಿನೀಕಪೋ
ಲದ ಮೃಗನಾಭಿಲೇಖೆ ತೊಡೆಯೇಱಿದ ಯಾಮಿನಿಯಂಗಕಾಂತಿಯ ।
ಪ್ಪಿದೊಡೆ ಸಡಿಲ್ದ ರೋಹಿಣಿಯ ಸೋರ್ಮುಡಿ ಮೆಯ್ಯ ಮುರಿವೇಱ್ವ ಪೂರ್ವದಿ
ಕ್ಸುದತಿಯ ಪೀವರಸ್ತನದ ಚೂಚುಕವೊಪ್ಪಿದುದಿಂದುಲಾಂಛನಂ ॥ ೨೫೪

ಕರುಣಿಸದೆ ಬೇಟಕಾಱರ
ಶಿರಮಂ ಕೊಳ್ಗೆಂದು ಕಂತು ಮಧುವಿಂಗಟ್ಟಲ್ ।
ಪರೆದೆಲೆಗೊತ್ತಿರ್ದುಂಡಿಗೆ
ಯರಗನೆ ಪೋಲ್ದತ್ತು ಶೀತಕರನ ಕಳಂಕಂ ॥ ೨೫೫

ಒತ್ತಂಬದೆ ವಿರಹಿಗಳಂ
ಚಿತ್ತಭವಂ ಬಂದಿವಿಡಿದು ಗಂಟಲ ಬಳೆಯಂ ।
ಪತ್ತಿಸಿದ ಚಂದ್ರಕಾಂತದ
ಕತ್ತರಿಯೆನೆ ತೊಳಗಿ ಬೆಳಗಿತೆಳವೆಱೆ ನಭದೊಳ್ ॥ ೨೫೬

ಸಿರಿ ಬಂದಾಶ್ರೈಸಿದಳ್ ಮಾಧವನುದರದೊಳೊತ್ತಿಟ್ಟುಕೊಂಡಂ ದಿನೇಶಂ
ಪಿರಿದುಂ ಕೂರ್ಪಂ ಸುಧಾಸೂತಿಯೆ ಮುನಿವವನೆಮ್ಮನ್ವಯಕ್ಕೆಂದು ನೀರೇ ।
ಜರುಹಂ ಕಾಯ್ಪಿಂ ನಿಜಾಗ್ರಾಯುಧವನಿಡೆ ಸಿಡಿಲ್ದೊಂದುಭಾಗಂ ನಭೋಭ್ಯಂ
ತರದೊಳ್ ಸೂಸಿತ್ತೆನಲ್ಕೇನೆಸೆದುದೊ ಭಗಣಾನೀಕದಿಂದರ್ಧಚಂದ್ರಂ ॥ ೨೫೭

ಕಟಲೆ ಮನವಟಲೆ ಪಾಣ್ಬರ್
ಬಟಲೆ ಖಳರ್ ತೊಟಲೆ ದನುಜರುಡುಗಿ ಕರಂ ತ ।
ಲ್ಲಟಿಸೆ ವಿಯೋಗಿಗಳಂಬಂ
ಘಟಿಯಿಸಲಂದೊಗೆದುವೊಂದಿ ಹಿಮಕರಕಿರಣಂ ॥ ೨೫೮

ಪಸಿದು ದಿನೇಶನೆಂಬ ಪಿಶಿತಾರುಣಖಂಡಮನೊರ್ಮೆ ನುಂಗಿ ರಾ
ಗಿಸಿ ಕಿಸುಸಂಜೆಯೆಂಬ ನವಲೋಹಿತದೊಳ್ ಪೊರೆದೊಂದು ಬಾಯಗು |
ರ್ಬಿಸಿ ತಮಮೆಂಬ ತನ್ನ ಮುಸುಕಂ ಕಳೆದಿರ್ದಿರುಳೆಂಬ ಕಾಳರ
ಕ್ಕಸಿ ನಗಲೆಂದು ಪಲ್ದೆಱೆದ ಮಾಳ್ಕೆವೊಲಿರ್ದುವು ಚಂದ್ರರಶ್ಮಿಗಳ್ ॥ ೨೫೯

ತಾರೇಶ ತಾರ್ಕ್ಷ್ಯನಂಶುವಿ
ಸಾರಿತಪಕ್ಷಂ ಬರಲ್ ನಭಶ್ಚಂದನಧಾ |
ತ್ರೀರುಹಮಂ ಸುತ್ತಿದ ಕಾ
ಳೋರಗನೋಡುವವೊಲೋಡಿ ಪೋದುದು ತಿಮಿರಂ ॥ ೨೬೦

(ಜಗನ್ನಾಥವಿಜಯಂ, ೧೭-೧೦೭.)

ಘನಸಂಧ್ಯಾರುಚಿರಜ್ಜುವಿಂದುದಯಶೈಲಸ್ತಂಭದೊಳ್ ಕಟ್ಟಿ ತೊ
ಟ್ಟನೆ ಕೈಕೊಳ್ವ ಕಳಂಕವತ್ಸನನಲಂಪಿಂದೂಡಿ ತಾರಾನಿಬಂ |
ಧನದಿಂದಂ ತಳೆಯಿಕ್ಕಿ ರಾತ್ರಿ ಕಱೆದಳ್ ಬ್ರಹ್ಮಾಂಡಭಾಂಡಂ ಪಳ
ಚ್ಚನೆ ತೀವುತ್ತಿರೆ ಚಂದ್ರಮಸ್ಸುರಭಿಯಿಂ ಜ್ಯೋತ್ಸ್ನಾಪಯಃಪೂರಮಂ ॥ ೨೬೧

ಹಿಮರೋಚಿರ್ಮಂಡಲಂ ಕುಂಡಲಿತ ಕುಸುಮಕೋದಂಡಮಂ ಪೋಲೆ ಶೃಂಗಾ
ರಮಯಂ ಭೂಲೋಕಮಪ್ಪಂತಿರೆ ವಿರಹಿಗೆ ಶಶ್ವದ್ಧನುರ್ವೇದವಿದ್ಯಾ |
ಶ್ರಮಮಂ ತೋಱಲ್ ಕಳಂಕಸ್ಮರನಿಸೆ ತುಱುಗಲ್ಗೊಂಡು ಪಾಯ್ವಂತೆವೋಲ್ ಕೌ
ಸುಮಬಾಣಾಸಾರದಂತೇಂ ಸುರಿದುದೊ ನವನೀಹಾರಕಾಂತಿಪ್ರವಾಹಂ ॥ ೨೬೨

(ಲೀಲಾವತಿ, ೨-೧೩.)

ಎಲೆ ಶೃಂಗಾರಾರ್ಣವಂ ಸಗ್ಗದಿನಿಟಿದುದತಿಶ್ವೇತಮೆಂಬನ್ನೆಗಂ ಕ
ಟ್ಟಲೆಯಂ ಬೆಂಕೊಳ್ವವೋಲೆಣ್ದೆಸೆಯನನಿತುಮಂ ಬೇಱೆವೇಱಲ್ಲ ತಾರಾ |
ವಲಿಯಂ ತಳ್ಕೈಸುವಂತಾಗಸಮನನಿತುಮಂ ಪರ್ವಿದತ್ತೊರ್ವೊರ್ದಲ್ ನೆ
ಯ್ದಿಲನೆಲ್ಲಂ ಚುಂಬಿಪಂತುರ್ವರೆಯನನಿತುಮಂ ಚಂದ್ರಪಾದಪ್ರವಾಹಂ ॥ ೨೬೩

(ಲೀಲಾವತಿ ೨-೧೪.)

ಬಳವೈರಿಯೆಂಬ ಸಾಧಕ
ನಿಳೆಯಂ ಪೊಸಮೂಷೆಮಾಡಿ ಸಸಿಮಂಡಲಮಂ |
ಗುಳಿಗೆಯಿಡೆ ತಿಮಿರಕಾಳಿಕೆ
ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ ॥ ೨೬೪

(ಅನಂತನಾಥಪುರಾಣಂ, ೭-೮೫.)

ಅವನೀವಲ್ಲಭೆ ಕೊಂಡ ಬೆಳ್ವಸದನಂ ನೀರೇಜಗರ್ಭಂ ವಿಯ
ದ್ಧವಳಾಗಾರದೊಳಿಟ್ಟ ಪಾಲ್ಸೊದೆ ಕರಂ ಮಿಂಚಲ್ ದಿಗಂತಂ ಮುಟುಂ।
ಗುವಿನಂ ಸೂಸಿದ ಶಂಖಮೋಟ್ಟದಿದರಂ ಪಾರ್ದಾರ್ದೆಸಲ್ ಸಾರ್ದ ಕಂ
ತುವಸಂ[1]ತರ್ ತೆರೆವೇಂಟೆಗಿಟ್ಟ[1] ದುಗುಲಂ ಪರ್ವಿತ್ತು ಚಂದ್ರಾತಪಂ॥ ೨೬೫

(ಅನಂತನಾಥಪುರಾಣಂ, ೭–೮೬.)

ಇನನಸ್ತಾದ್ರಿಯನೆಯ್ದಲಾರುಣತೆಯಂ ಕೈಕೊಂಡು ಪೂರ್ವಾದ್ರಿಯೊಳ್
ಘನರಾಗಂ ಬೆರಸೆಯ್ದಿ ಪದ್ಮಿನಿಗೆ ಕಯ್ಯಂ ನೀಡೆ ತಚ್ಛೈತ್ಯದಿಂ।
ದಿನಿಯಂ ತಾನಿವನಲ್ಲವೆಂದು ಮುಗಿಯಲ್ ಮೂಡಿರ್ದ ಕಾಮೋದಿ ಕಂ
ಡೆನಸುಂ ನಕ್ಕೊಡೆ ನಾಣ್ಚಿದಂತೆ ನಭದೊಳ್ ಬೆಳ್ಪೇಱಿದಂ ಚಂದ್ರಮಂ॥ ೨೬೬

ತವಕದಿನಪ್ಪಲುತ್ಪಲನಿಱುಂ ಕರವಾದುವು ಕೊ[ಲ್ವ]ಳ್ವ [2]ಭೀಷು[2]ವಾ
ದುವು ಪೊಣರ್ವಕ್ಕಿಗಿಕ್ಕಿ ವನಜಾವಳಿಯಂ ತುಟಿಯಲ್ಕೆ ಪಾದವಾ।
ದುವು ಸಲೆ ಕೇತುವಾದುವು ವಿಯೋಗಿಗೆ ಲೋಕದ ಕಣ್ಗೆ ಧಾಮವಾ
ದುವು [3]ಸುಧೆ[3]ಯಾದುವೀಂಟುವ ಚಕೋರಿಗೆ ಚಂದ್ರನ ಚಾರುಕಾಂತಿಗಳ್॥೨೬೭

(ಲೀಲಾವತಿ, ೨–೧೬.)

ವನಜಂ ಬಂದುದು ಮುನ್ನವೆನ್ನ ಬಸಿಱಿಂದಂ ಕೋಟಿಕೂಸಿಂಗೆ ಗೋ
ಮಿನಿಗೆಂದುಂ ನೆಲೆಯಾಗಿ ನಿಂದುದಳಿಯಂ ನೀರೇಜನಾಭಂಗೆ ಲೋ।
ಚನವಾಗಿರ್ದುದದರ್ಕೆ ಮುಳಿಯಲ್ವೇಡೆಂದು ದುಗ್ಧಾಬ್ಧಿ ನಂ
ದನನಂ ಪ್ರಾರ್ಥಿಸಲೆಂದು ಬಂದ ತೆಱದಿಂ ಪರ್ಬಿತ್ತು ಚಂದ್ರಾತಪಂ ॥೨೬೮

ಇಂದು ಜಲನಿಧಿಯ ಬಸಿಱೊಳ್
ಬಂದುದು ಪುಸಿ ಪೂರ್ಣಚಂದ್ರಮನ ಬಸಿಱೊಳ್ ತಾಂ।
ಬಂದುದು ಬೆಳದಿಂಗಡಲೆಂ
ಬಂದದಿನೇಂ ಪಸರಿಸಿತ್ತೊ ಪೊಸವೆಳ್ದಿಂಗಳ್॥ ೨೬೯

(ಲೀಲಾವತಿ, ೨–೨೪.)

ಪುಗಿಸಿದುವಟ್ಟಿ ಪರ್ವತಗೃಹಾಂತರಮಂ ಕೆಲವಂ ಗವಾಕ್ಷದಿಂ
ದುಗಿದುವು ದೇವಸದ್ಮದೊಳಡಂಗಿದುವಂ ಬಯಲಿಂಗೆ ಬಿಟ್ಟುವಂ।
ತಗುಳ್ದಱಿಯಟ್ಟಿ ನುಂಗಿದುವು ಪೆರ್ಮರದೊಳ್ ಸೆಱೆಗೆಯ್ದು ಪರ್ಣಸಂ
ಗಳೆಡೆಯಿಂದಲಿಟ್ಟೊಱಸಿ ಕೊಂದವು ಕತ್ತಲೆಯಂ ಹಿಮಾಂಶುಗಳ್॥ ೨೭೦

(ಮಲ್ಲಿನಾಥಪುರಾಣಂ,೭–೩೯.)

---

[1] ತಂ ತರೆವೆಟ್ಟಿನುಟ್ಟ (ಖ). [2] ಭೀಕ್ಷು (ಅ). [3] ರುಚಿ (ಖ,ಬ).

ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಮೊಳೆವೋದುದಿಂದುಕಾಂ
ತಂಗಳ ಬೆಳ್ಪು ಮೋದಿದುದು ನೆಯ್ದಿಲ ಬೆಳ್ಪು ಮಡಲ್ತುದಚ್ಚವೆ ।
ಳ್ದಿಂಗಳ ಬೆಳ್ಪು ಬಳ್ಳಿವರಿದತ್ತೆಳವೆಂಡಿರ ಕಣ್ಣ ಬೆಳ್ಪು ಸೌ
ಧಂಗಳ ಬೆಳ್ಪು ಪರ್ಬಿದುದು ಬೆಳ್ಪಿನ ಬಲ್ಸರಿ[1][ಯಿಂ][1] ಸುಧಾಂಶುವಾ ॥ ೨೭೧

ಇಂಗಡಲೆ ಕಡಲ್ಗಳ್ ಸೌ
ಧಂಗಳೆ ಸದನಂಗಳಿಂದುಕಾಂತವೆ ಕಲ್ಗಳ್ ।
ಗಂಗೆಯೆ ತೊಱೆಗಳೆನಲ್ ಬೆ
ಳ್ಗಂಗೆಡೆದುದು ಕುಮುದವನದ ಸಿರಿ ಬೆಳ್ದಿಂಗಳ್ ॥ ೨೭೨

(ಮಲ್ಲಿನಾಥಪುರಾಣಂ, ೭-೪೨.)

ಲವಣಾಂಭೋನಿಧಿ ದುಗ್ಧವಾರ್ಧಿಚಯದಂತಿರ್ದತ್ತು ಕಾಳಿಂದಿ ಜಾ
ಹ್ನವಿಯಂತಿರ್ದುದು ನೀಲಪರ್ವತಮೆ ಕೈಲಾಸಾದ್ರಿಯಂತಿರ್ದುದೀ ।
ಭುವನಂ ಕಪ್ಪುರದಿಂದೆ ಕಂಡರಿಸಿದಂತಿರ್ದತ್ತು ಕೃಷ್ಣಂ ಸದಾ
ಶಿವನಂತಿರ್ದನೆನಲ್ಕದೇವೊಗಟ್ವೆನೋ ಪೇಟಚ್ಚವೆಳ್ದಿಂಗಳಂ ॥ ೨೭೩

ನಳಿನೀಸಂಮೋಹನಾಸ್ತ್ರಂ ಕುಮುದನಯನಕರ್ಪೂರಕಾಂಡಂ ಚಕೋರೀ
ತಿಳಕಂ ಶೃಂಗಾರಸಿಂಧುಪ್ಲವಬಿಸಲತೆ ತಾರಾಪುರಂಧ್ರೀಕಪೋಲ ।
ಸ್ಥಳಪತ್ರಂ ಚಂದ್ರಕಾಂತೋಪಳ[2]ಪರಿಸಲಿಲಾಮೋದ[2]ಶಸ್ತ್ರಂ ಮನೋಜಾ
ನಳಜಿಹ್ವಾಕ್ಷೀರಧಾರಾಹುತಿ ಪಸರಿಸೆ ಪರ್ವಿತ್ತು ಚಂದ್ರಾಂಶುಜಾಲಂ ೨೭೪

(ಮಲ್ಲಿನಾಥಪುರಾಣಂ, ೭-೪೦.)

ಪಗಲಂತಿರ್ದಚ್ಚವೆಳ್ದಿಂಗಳೊಳಿನಕಿರಣಭ್ರಾಂತಿಗೆತ್ತಾಗಳಾಗಳ್
ಮುಗಿದಿರ್ದಂಭೋಜಮೋರೊಂದಲರ್ದುವು ಬಿಸುಸುಯ್ಯುತ್ತಗಲ್ದಿರ್ದ ನೀರ್ವ ।
ಕ್ಕಿಗಳೆಲ್ಲಂ ಕೂಡಿ ತೋಡಾದುವು ಕುವಲಯಷಂಡಂಗಳಾಶಂಕೆಯಿಂದಂ
ಮುಗಿಯಲ್ಕೆಂದಿರ್ದುವೇನುಜ್ವಲಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ ॥ ೨೭೫

(ಆದಿಪುರಾಣಂ, ೧೨-೯.)

ಇದು ಮತ್ತೇನೆಂಬೆ ಬೆಳ್ದಿಂಗಳ ಬೆಳತಿಗೆಯಂ ಹಂಸೆ ಪಾಲ್ಗೆತ್ತು ಸಾರ್ದ
ಪ್ಪುದು ಮಲ್ಲೀಮಾಲೆಗೆತ್ತೆಯ್ದೆಱಗಿದಪುವು ಭೃಂಗಂ ಬಿಸಭ್ರಾಂತಿಯಿಂದಂ ।
ಕ[3][ದುಬು][3]ತ್ತುಂ ಕಯ್ಯೊಳಾರೈದಪುವಿಭಕಳಭಂ ಸಾಂದ್ರಚಂದ್ರಾಂಶುವಂ ಜಾ
ಱೆ ದುಕೂಲಂ ಲೀಲೆಯಿಂದಂ ತೆಗೆದಪುದು ಕುಚಾಗ್ರಕ್ಕೆ ಕಾಂತಾಕದಂಬಂ ॥ ೨೭೬

---

[1] ಯಂ (ಖ.ಬ). [2] ಸಲಿಲಸಿರಾವೋಕ್ಷ (ಅ). [3] ದುರ್ಕು (ಕ.ಖ.ಬ).

ತರತರದಿಂದ ನಾರುಗಿದು ತೋಳ್ವಳೆ ಮಾಡುವ ಕೊಯ್ದು ತಂದು ಪಾ
ದರಿಯೊಡಗಟ್ಟಿ ಸೂಡುವಲರ್ಗಂಗಳೊಳೊತ್ತುವ ಕೀಸಿ ಮೆಲ್ವ ನೀ।
ಳ್ದರೆ ಪೊರೆಯೆತ್ತಿ ಕೊಂಡರರೆ ಪೊಂಗೊಡದೊಳ್ ಮಡಗಿಟ್ಟು ಪೊಟ್ಟಿಱಿಂ
ಗಿರಿಸುವಲಂಪಿನಿಂ ಬಯಸಿದರ್ ಘನಚಂದ್ರಿಕೆಯಂ ಲತಾಂಗಿಯರ್ ॥ ೨೭೭

ಸುರತಾಂತಶ್ರಾಂತಿಯಿಂ ನೀರಡಿಸಿದಬಲೆಯುಗ್ರೀರ್ಂಟುತೌತ್ಸುಕ್ಯದಿಂ ನ
ಲ್ಲರೊಳೊಂದಲ್ ಪೋಪ ನಾರೀಜನಕೆ ಪಱುಗಲಿಟ್ಟೇಱಲುದ್ಯಾನಮಾಲಾಂ।
ತರದೊಳ್ [1][ಪೊಚ್ಚಂಗ][1]ಳಂ ತಿರ್ದಿಸಲವಿರಳಘರ್ಮಾರ್ದ್ರಕಾಂತಾಜನಕ್ಕಾ
ದರದಿಂ ನೀರಾಟವಾಡಲ್ ನೆಱೆದುದೆನಿಸಿ ಪರ್ಬಿತ್ತು ಚಂದ್ರಾಂಶುಜಾಲಂ॥ ೨೭೮

[2]ಬೆಲಗಸೆ[2] ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬ
ಚ್ಚಲನೆಲೆದೋಟದೊಳ್ ಪರಿಯಿಸಲ್ ಪಱುಗೋಲ್ಗಳನಿಕ್ಕಿ ಪಾಯಿಸಲ್।
ನೆಲೆಯಿನಿತೆಂದು ನೋಡಲೊಳಪೊಕ್ಕು ದುಡುಮ್ಮಿಱಿದಾಡಲೀಸಲ
ಗ್ಗಲಿ[3]ಸುವಲಂಪಿನಿಂದೆಳಸಿದರ್ ಘನಚಂದ್ರಿಕೆಯಂ ಲತಾಂಗಿಯರ್[3] ॥ ೨೭೯

(ಅಜಿತನಾಥಪುರಾಣಂ, ೬-೪೫—ಕಾವ್ಯಾವಲೋಕನಂ, ೮ ೫೫.)

ಪಾರದದಿಂದೆ ಲೇಪಿಸಿದುದೋ ದೆಸೆ ನೀರದಮಾರ್ಗಮೆಯ್ದೆ ಕ
ರ್ಪೂರ ಪರಾಗದಿಂದಿಡಿಯೆ ತುಂಬಿದುದೋ ಸ್ಫಟಿಕೋಪಲಂಗಳಿಂ।
ಧಾರಿಣಿ ಕೂಡೆ ಹಪ್ಪಳಿ[4]ಗೆಯೊ[4]ತ್ತಿದುದೋ ಸಲಿಲಾಶಯಂ ಪಯಃ
ಪೂರಮನಾಂತುದೋ ದಿಟಕೆ ತಾನೆನಿಸಿತ್ತಮೃತಾಂಶುರಶ್ಮಿಯಿಂ ॥ ೨೮೦

(ಚಂದ್ರಪ್ರಭಪುರಾಣಂ, ೮-೩೯.)

ಇದು ವಿರಹಕ್ಕಲ್ಲದೆ ಕಾ
ಯದ ಬಿಸಿಲಿದು ದಿಟ್ಟಿಗಲ್ಲದಿ[5]ನಿತೀಂಟಲ್[5] ಬಾ।
ರದ ಸುಧೆಯಿದು ತಾಂ ಮನಕ
ಲ್ಲ[6]ದುಡ[6]ಲ್ ಸಮನಿಸದ ದುಗುಲ[7]ಮಳ[7]ವೆಳ್ದಿಂಗಳ್ ॥ ೨೮೧

(ಚಂದ್ರಪ್ರಭಪುರಾಣಂ, ೮-೪೦.)

ದ್ಯುನದೀಸಂಮೋಹದಿಂದಂ ಜಡೆಗೆದಱಲುಮಾವಲ್ಲಭಂ ನಾಡೆಯುಂ ಪಾ
ರ್ವನೆಗಂ ಪೀಯೂಷವಾರ್ಧಿಪ್ಲವಪರಿಣತಿಯಿಂ ಸೆಜ್ಜೆಗಬ್ಜೋದರಂ ಸಾ।
ರ್ವನೆಗಂ ಹಂಸಂ ಮೆಲಲ್ಕೆಂದೆಳಸಿ ಬಿಸಲತಾಶಂಕೆಯಿಂ ಚಂಚು[8]ವಿಂ[8] ನೇ
ರ್ವನೆಗಂ ಪ್ರೋನ್ಮುದ್ರಿತಂ ಮುದ್ರಿಸಿದುದು ಜಗಮಂ ಚಾರುಚಂದ್ರಾಂಶುಜಾಲಂ॥

(ಚಂದ್ರಪ್ರಭಪುರಾಣಂ, ೮-೪೧.)

---

[1] ಪಚ್ಚಂಗ (ಕ.ಖ.ಪ). [2] ಬೆಳಸಿಗೆ (ಖ.ಬ). [3] ಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ(ಅ). [4] ಕೆವ (ಖ.ಬ). [5] ದೀಂಟಲ್ಕಂ (ಅ). [6] ದೆದ (ಖ.ಬ). [7] ಮಾ (ಖ.ಬ). [8] ವಳ್ (ಖ.ಬ).

ಕೆಂಪಿಲ್ಲದ ಬಿಸಿಲುಣ್ಮುವ
ಕಂಪಿಲ್ಲದ ಸಾಂದ್ರಚಂದನಕ್ಷೋದಂ ಮ ।
ತ್ತಿಂಪಿಲ್ಲದ ಪಾಲ್ಗಡಲೆಂ
ಬೆಂ ಪೊಸವೆಳ್ದಿಂಗಳಂ ಬಟಿಕ್ಕೇನೆಂಬೆಂ॥ ೨೮೩

(ಚಂದ್ರಪ್ರಭಪುರಾಣಂ, ೮–೪೩.)

[1]ಎ[1]ಡೆನಾಣ್ಮುಚ್ಚದ ನಾಗವಟ್ಟಣಿಗೆ ಹೊಕ್ಕೀಸಾಡೆ ಮೈ ನಾನದಿಂ
ಗಡಲಾಸ್ವಾದಿಸೆ ಹೊಟ್ಟೆ ತೀವದಮೃತಂ ಮೈಸಾರ್ಚಲುಷ್ಣತ್ವಮಂ ।
ಕುಡದರ್ಕಪ್ರಭೆ ನೋಡೆ ತೋಱು ಮಗುಟ್ದಂತಲ್ಲಾಡದೊಳ್ಮಿಂಚೆನಲ್
ಕಡು ಚೆಲ್ವಾದುದು ಕಣ್ಗೆ ಸಾಂದ್ರರುಚಿಯಿಂ ಚಂದ್ರಾತಪಾಡಂಬರಂ ॥ ೨೮೪

ಉರುಳಿಸಿ ವೆಜ್ಜಮಂ ಕಳೆದು ಕೋದೊಡೆ ಮುತ್ತಿನ ಹಾರಮಪ್ಪ ಸೀ
ಳ್ದರೆ ಪೊರೆಯೆತ್ತಿ ಪಟ್ಟಣಿಗೆಯಪ್ಪುಗುರಿಂದೆ ಕಟಲ್ಚೆ ತೋರಗ ।
ಪ್ಪುರವಳುಕಪ್ಪ ಬಕ್ಕಬಯಲಂ ಕಡೆಯಲ್ ಧವಳಾರಮಪ್ಪ ಬಂ
ಧುರ ವರ ಸಾಂದ್ರಮಕ್ಕೆ ನೆಲೆಯಾದುದು ಚಂದ್ರಿಕೆಯೇಂ ವಿಚಿತ್ರಮೋ ॥ ೨೮೫

ಕರಗಿಸೆ ಬೆಳ್ಳಿಯಪ್ಪುದಿದು ತೆಳ್ಪೊರೆಯೆತ್ತೆ ದುಕೂಲಮಪ್ಪ ಕಂ
ಡರಿಸೆ ಮರಾಳಮಪ್ಪುರುಳಿಮಾಡಿ [2]ಸ[2]ರಂಗೋಳೆ ತಾರಹಾರಮ ।
ಪ್ಪರೆದೊಡೆ ಸೌಧಸಂತತಿಗೆ ಪಾಲ್ಸೊದೆಯ[3]ಪ್ಪುಗುರಿಂ ಕಟಲ್ಚೆ[3] ಕ
ಪ್ಪುರವಳುಕಪ್ಪಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ ॥ ೨೮೬

(ಜಗನ್ನಾಥವಿಜಯಂ, ೧೬–೧೦೯.)

ಎಳಮಿಂಚಂ ಸಂತವಿಟ್ಟಂತೆಸೆದುದು ಬೆಳಗಿಂ ಬಣ್ಣಮುತ್ತಣ್ಣವಾರಿಂ
ತೊಳೆದಂತಾದತ್ತು ಬೆಳ್ಪಿಂ ಪಳುಕಿನ ಬೆಳಗಂ ಬಿರ್ದಂತಾಯ್ತು ತೆಳ್ಪಿಂ ।
ಚಳವೀಚೀಕ್ಷುಬ್ಧದುಗ್ಧಾಂಬುಧಿಯನೆ ತೆಗೆದಂತಾಯ್ತು ಮೆಯ್ವೆತ್ತ ಪೆರ್ಚಿಂ
ಬಳವತ್ಪುಷ್ಪಾಸ್ತ್ರಕೀರ್ತಿಪ್ರಸವಸಹಚರಂ ಚಂದ್ರಿಕಾಶ್ರೀವಿಲಾಸಂ ॥ ೨೮೭

ಕುಸುಮಂ ಗಂಧಾನುಮೇಯಂ ಗಮನಕಮನ ಹಂಸಾಳಿ ಶಬ್ದಾನುಮೇಯಂ
ರಸನಾಸ್ವಾದಾನುಮೇಯಂ ಮಧುಮಲಯರುಹಕ್ಷಾಮಕರ್ಪೂರಮುಕ್ತಾ ।
ವಿಸರಂ ಸ್ಪರ್ಶಾನುಮೇಯಂ ದಿಟಮೆನೆ ಘಟಿತಂಬೆತ್ತ ಬೆಳ್ದಿಂಗಳಂ ಭಾ
ವಿಸೆ ಲೋಕಂ ಚಂದ್ರಕಾಂತೋಪಳದ[4]ಮಯಣ[4]ದೊಳ್ ಮಾಡಿದಂತಿರ್ದುದಾಗಳ್ ॥

(ಅನಂತನಾಥಪುರಾಣಂ, ೭–೮೭)

---

[1] ಉ (ಖ.ಬ). [2] ತ (ಖ.ಬ.) [3] ಪ್ಪತಟಲ್ಚಿಕೂಡೆ (ಅ). [4] ನಯನ (ಅ).

ನವರತ್ನಾನೀಕಮೆಲ್ಲಂ ಸುರುಚಿರನವಮುಕ್ತಾಮಯಂ ಪುಷ್ಪಮೆಲ್ಲಂ
ಪ್ರವಿಭಾಸ್ವನ್ಮಲ್ಲಿಕೋಜ್ಜೃಂಭಿತ ಕುಸುಮಮಯಂ ಭೂಧರಶ್ರೇಣಿಯೆಲ್ಲಂ ।
ಸವಿಶೇಷೋತ್ಪೀತದಾಹೋತ್ಕರ ರಜತಮಯಂ ಭೂರಜೋಜಾಲಮೆಲ್ಲಂ
ಪ್ರವ[ಹತ್]ತಃಪ್ರಾಲೇಯಧೂಳೀಮಯಮೆನಿಸಿದುದಾ ಚಂದ್ರಿಕಾಶ್ರೀವಿಲಾಸಂ ॥

ಸುರರಾಜದ್ವಿಪದೇಹಕಾಂತಿ ಮದಲೇಖಾಕಾರ್ಷ್ಣ್ಯಸಂಯುಕ್ತಮಾ
ಹರಹಾಸಪ್ರಭೆ ಕಾಳಿಕೋಪಚಿತಮಾ ಶೇಷಾಹಿದೇಹಾಂಶುವು ।
ದ್ಗರಳವ್ಯಾವೃತಮಾ ಸುಧಾಬ್ಧಿರುಚಿ ಕೃಷ್ಣೋಪೇತಮೆಂದಿಂತು ಮಾಂ
ಕರಿಸುತ್ತಿರ್ಪುದು ನಿರ್ಮಳಪ್ರಕೃತಿಯಿಂ ಚಂದ್ರಾತಪಾಡಂಬರಂ ॥ ೨೯೦

ಭುವನಮನಾವಗಂ ಪುದಿದು ತೀವಿದ ತಣ್ಗದಿರ್ಗಳ್ ಪೊದಟ್ದು ಕೈ
ರವವನಮಾದುವೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ ।
ದುವು ಸುರಸಿಂಧುವಾದುವು ಸುಧಾರ್ಣವಮಾದುವು ಚಂದ್ರಕಾಂತಮಾ
ದುವು ಹಿಮವಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುದೇ ॥ ೨೯೧
(ಲೀಲಾವತಿ, ೩-೭.)

ಇದು ವಿಧುಬಿಂಬಮಪ್ಪುದಿನಮಂಡಲಮಲ್ತಿದರಲ್ಲ ನೆಯ್ದಿಲ
ಪ್ಪುದು ಸರಸೀಜಮಲ್ತಿದು ಶಶಿಪ್ರಭೆಯಪ್ಪುದು ಭಾನುದೀಪ್ತಿಯ ।
ಲ್ತಿದು ಹಗಲಲ್ಲದಿಲ್ಲದಿರುಳಪ್ಪುದಿದಪ್ಪುದು ತಪ್ಪದೆಂದು ನೋ
ಡಿದರಭಿಶಂಕೆಯಂ ತಳೆಯೆ ಪಜ್ಜಳಿಸಿತ್ತು ಸುಧಾಂಶುಮಂಡಲಂ ॥ ೨೯೨

ಎಲೆ ನೋಡಲ್ ಸುರಗಂಗೆ ಕೋಟಿಮುಖದಿಂದೆಟ್ಟಂದಳಲ್ತಲ್ತು ನಿ
ರ್ಮಲ ದುಗ್ಧಾಬ್ಧಿಯೆ ಮೇರೆದಪ್ಪಿ ಕವಿಯಿತ್ತಲ್ತಲ್ತು ಗೌರೀಶನು ।
ಜ್ಜ್ವಲ ಸತ್ಪಂಚಮಮೂರ್ತಿ ಧಾರಿಣಿಯನಿಂದಪ್ಪಿರ್ದುದಲ್ತಲ್ತು ಕೇ
ಳಿಳೆಯೊಳ್ ಕೌತುಕಮಪ್ಪಿನಂ ಪಸರಿಸಿತ್ತಾನಂದಚಂದ್ರಾತಪಂ ॥ ೨೯೩

ಇಂದುಪ್ರಾಲೇಯಶೈಲದ್ಯುನದಿ ಶಶಿಶರನ್ಮೇಘಮುಕ್ತಾಂಬುಧಾರಾ
ವೃಂದಂ ಜ್ಯೋತ್ಸ್ನಾಪ್ರವಾಹಂ ಕವಿದುದು ವಿಧುಶಕ್ರೇಕ್ಷಿತಂ ಶೀತರೋಚಿಃ ।
ಕುಂದೋದ್ಯನ್ಮಂಜರೀನಿರ್ಗತನಿಬಿಡರಜಂ ಚಂದ್ರರುದ್ರಾಟ್ಟಹಾಸ
ಸ್ಪಂದಂ ಪ್ರೋದ್ಭಿನ್ನ ಸೋಮಾಮರಕರಟಿಶಿರೋಪಾಂತಮುಕ್ತಾಚ್ಛವರ್ಷಂ ॥
(ಲೀಲಾವತಿ, ೨-೧೨.)

ತಾರಗೆಗಳ್ ಮುಸುಂಕೆ ಕುಮುದೋಜ್ಜ್ವಲಕಾಂತಿ ತುಳುಂಕೆ ಕೂಡೆ ಪಂ
ಕೇರುಹರಾಜಿ ಕಂದೆ ಪೊಣರ್ವಕ್ಕಿಯ ಕಣ್ಬೊಣ[1][ರಟ್ಟಿ][1]ಗುಂದೆ ಶೃಂ ।

---

[1] ರಲ್ತು (ಖ.ಬ).

ಗಾರದಡರ್ಪುರ್ ಜಾರೆಯರ ಕೂರ್ಪುರ್ ಚಕೋರಿಗಳಾಸೆ ಮಿಕ್ಕ ನೀ
ಹಾರದ ದೇಸೆ ಕಣ್ಗೆಸೆದುದುಜ್ಜ್ವಲದಿಕ್ಪ್ರಕರಂ ಸುಧಾಕರಂ ॥ ೨೯೫

ಮದನದವಾಗ್ನಿತಪ್ತೆಯರ ಸು[1]ಯ್ಯನಖಂಪಚಮಾಗಿ[1] ಬಪ್ಪವಿಂ
ಗದಿರನಲರ್ಚೆ ಚಂಚುವಿನೊಳೊಯ್ಯನರಲ್ದೊಲೆವುತ್ಪಲಾಗ್ರಪ ।
ತ್ರದೆ ಮೊಗೆದೂಡಿ ಪಾಡಿ ನಲಿದಾ[2]ಲಿ[2]ಸಿ ತೋಱಿಸಿ ಸೋಂಕಿ ನೂಂಕಿ ಕೌ
ಮುದಿಯೊಳದೇಂ ಚಕೋರಿ ಪಿಳುಗಾಡಿಸಿದತ್ತು ನಿಜಾಗ್ರಶಾಬಮಂ॥ ೨೯೬
(ಅನಂತನಾಥಪುರಾಣಂ, ೭–೮೧.)

ತೆರೆಮಸಗುತ್ತಮಿರ್ಪ ಘನಚಂದ್ರಿಕೆಯಂ ಪರಮಾನುರಾಗದಿಂ
ಪರಿದಿದಿರೇಱಿಯೇಱಿ ನಗೆಗಣ್ಪೊಣರೊಳ್ ತೆಗೆದೆತ್ತಿಯೆತ್ತಿ ನಿ ।
ರ್ಭರತೆಯೊಳೀಂಟಿಯೀಂಟಿ ನೆರೆದೋಕುಳಿಯಾಡಿಯಾಡಿ ಮ
ಚ್ಚರದೊಳೆ ತುಳ್ಕಿ ತುಳ್ಕಿ ನಲಿದಪ್ಪುವು ಕೂಡೆ ಚಕೋರಸಂಚಯಂ ॥ ೨೯೭

ನೆರೆದು ಚಕೋರಪ್ರಕರಂ
[3]ಖ[3]ರಚಂಚುವಿನುಡಿದು ತಿನೆ ಸುಧಾಕರಕಿರಣಾಂ ।
ಕುರನಿಕರಮನಮರ್ದಿನ ಸೊನೆ
ಸುರಿದಪುದೆನೆ ಪಸರಿಸಿತ್ತು ಪೊಸವೆಳ್ದಿಂಗಳ್ ॥ ೨೯೮
(ಲೀಲಾವತಿ, ೨–೨೩.)

ಅತ್ತಟಲೆ ರಥಾಂಗಾಸುರ
ರಿತ್ತೀಂಟೆ ಚಕೋರದಿವಿಜನಾಯಕರೇಂ ಸೂ ।
ಸಿತ್ತಾ ಗಗನಸ್ಥಲಿ ಹರಿ
ಯೆತ್ತಿದ ವಿಧುಕುಂಭದಮೃತಕರಧಾರೆಗಳಂ ॥ ೨೯೯
(ಲೀಲಾವತಿ, ೨–೨೧.)

ಕರೆದುವು ತಾಮರಲ್ದಗಿವ ತಾವರೆ ಕೂಡಿ ಕುಕಿಲ್ವ ಪಕ್ಕಿಗಳ್
ಪರೆದುವು ಮಾ[4]ಣ[4]ದಂಡಲೆವ ಹಂಸೆಗಳುಂ ತಡಿಸಾರ್ದು[5]ವಿನ್ನುಮೈ ।
ಸಿರಿಬರಲುಂಟು[5] ಚಂದ್ರಬಲಮುಂಟು ನಿಶಾಬಲಮೆಂದು ರಾಗದಿಂ
[6]ಬರೆ[6]ವವೊಲೇನೆಸಟ್ ಮಸಗುತಿರ್ದುವೊ ನೀಳ ಸರೋಜಮಾಲೆಗಳ್ ॥ ೩೦೦
(ಅನಂತನಾಥಪುರಾಣಂ, ೭–೬೭.)

ವಿರಹವ್ಯಾಕುಳಮಾಗೆ ಚಕ್ರಮಿಥುನಂ ಸಂಕೋಚಮಂ ತಾಳ್ದು ತಾ
ವರೆ ಕಾಮಾತುರಮುಂ ರಜೋಧಿಕರಮುಂ ಖೇದಕ್ಕೆ . . . ॥

---

[1] ಯ್ಯುರಿಯುಂಬ ಚಕೋರಿ (ಖ.ಬ). [2] ರಿ (ಖ.ಬ). [3] ಕ (ಖ.ಬ.) [4] ಡಿ (ಖ.ಬ). [5] ವೆಮ್ಮನೀಸಿರಿ ಬಿಡಳೆಂದು (ಖ.ಬ). [6] ಬರಿ (ಅ).

ದೋಷಾಂಧರೆನ ತ್ತವಂ ನೆಗುವವೋಲ್ ನೈದಿಲ್ಗೊಳಂ ಮೇಲ್ಮರ
ಲ್ದರಲುತ್ತಿರ್ದುದು ಚಂಚಕಂ ಮಧುರದಬ್ಜಾಹಾರವಾಚಾಳಿಕಂ ॥ ೩೦೧

ಕೊಳಕೆ ತಳಾಱನಾಯ್ತು ಕುಮುದಂ ಗಗನಕ್ಕೆ ತಳಾಱನಾಯ್ತು ಜಾ
ವಳಿಪ ಚಕೋರಮೀ ಪೊಸ ತಳಾಱಕೆಯೊಳ್ ಪ್ರಿಯೆ ಪೋದ ಪುಯ್ಯಲ ।
ಗ್ಗಲಿಸಿದೊಡಾರುಮೂಳಿಗಕೆ ಬರ್ಪವರಿಲ್ಲೆನಗೆಂಬ ಮಾಡ್ಕೆಯಿಂ
ದೊಳಱುವ ಕೋಕದೊಂದು ವಿಧಿಗಬ್ಬವೊಲಾಯ್ತು [1]ಸ[ರ್ವೆ೯ಂದ][1]ವೋಪಲಂ ॥

[2]ಮದಚಲ ಚಕೋರ[2]ಚಂಚೂ
ವಿದಳನದಿಂದಮೃತರಸದ [3]ಪೊನಲಿಡು[3]ತುಂ ಸೂ ।
ಸಿಧ ಬೆಳ್ದಿಂಗಳ ತಿರುಳಂ
ದದಿನಸದಳಮೆಸೆದುದೊಸರ್ವ ಶಶಿಮಣಿವಿಸರಂ ॥ ೩೦೩

(ಲೀಲಾವತಿ, ೨-೧೯.)

ಕರೆಯಲ್ಕಣ್ಮದೆ ಪೀಠಮರ್ದಕನುಮೆನ್ನಂ ಪಚ್ಚುವಂ ಮತ್ತೆ ನಾ
ಗರಿಕಂ ನೂಂಕಿದಪಂ ವಿಟಂ ಬೆರಲ ಕೊಂಕಿಂ ಸನ್ನೆಗೈದಪ್ಪನೆ ।
ಲ್ಲರ ಮಾತೇಂ ಭವದಂಘ್ರಿಪಲ್ಲವಮನೀ [4]ವಾತಾಯನೋಪಾತ್ತ[4]ಶೀ
ತರುಚಿಪ್ರಾಂಶುಕರಂ ಕರಂ ಪಿಡಿದುವೆನ್ನೀ ಸಲ್ಗೆಯಂ ಮನ್ನಿಸೈ ॥ ೩೦೪

(ಅನಂತನಾಥಪುರಾಣಂ, ೭-೮೮.)

ಎಂದು ವಿದೂಷಕನರಸನ
ಮಂದಸ್ಮಿತ ಲೋಚನಾಂಶು ಮ[5]ನದನುಮ[5]ತಿಯಂ ।
ಮುಂದಿಡೆ ಭೋಂಕನೆ ಕೈಗುಡು
ವಂದದೊಳೆ ಪಸಾದಮೆನುತೆ ಪೊಡೆವಡುತೆಟ್ದಂ ॥ ೩೦೫

(ಅನಂತನಾಥಪುರಾಣಂ, ೭-೮೯.)

ಧವಳಾಪಾಂಗಮರೀಚಿ ಮಂಡಳಿಸಿ ನಿಂದಂತಿರ್ಪ ಕರ್ಪೂರಕ
ರ್ಣವತಂಸಂ ಹರಿಚಂದನಂ ವಿಚಕಿಳಂ ಮುಕ್ತಾಫಳಂ [6]ಕ್ಷೌಮ[6]ಮೆಂ ।
ಬಿವಱಿಂ ಭೂಭುಜನೊಪ್ಪಿದಂ ಮೆಱೆವ ಪೌರಶ್ರೀಯನಿಂತೆಂದು ಬಿ
ನ್ನವಿಸಲ್ ಚಂದ್ರಿಕೆ ಬಂದು ಸಲ್ಗೆವಡೆದೊಲ್ದಾಲಿಂಗನಂಗೆಯ್ದುವೋಲ್ ॥ ೩೦೬

(ಅನಂತನಾಥಪುರಾಣಂ, ೭-೯೦.)

---

1 ವಿಂದು (ಖ.ಬ). 2 ಮದದಚಕೊರಂ (ಖ). 3 ಸೂನೆವಿಡು (ಖ.ಬ).
4 ವಾತ್ಯಾಯವಾಃಪಾತ (ಖ.ಬ). 5 ದನನಹ (ಖ.ಬ). 6 ಕ್ಷೋಧ (ಅ).

ಪೊಱಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂ
ಪುಟಿಸೆ ವಿಮಾನಮಂ ನಭದೊಳಿಟ್ಟಭಿವೀಕ್ಷಿಸಲಿಂದುಬಿಂಬದಿಂ ।
ದಿಟಿವಮೃತಾಂಶುಮೂರ್ತಿಯೆನೆ ಸಾಂದ್ರ[1]ಸುಧೋ[1]ಜ್ವಲ ಚಂದ್ರಶಾಲೆಯಿಂ
ದಿಟಿದು ನರೇಂದ್ರಚಂದ್ರನೊಲವಿಂ ತಳರ್ದಂ ನಿಜರಾಜಗೇಹದಿಂ ॥ ೨೦೭

(ಅನಂತನಾಥಪುರಾಣಂ, ೭–೯೧.)

ಪರಿ[2]ವೇದಿ[2] ನಗರದೊಳ್ ನಾ
ಗರಕಂ [3]ರತ[3]ಕೋವಿದಂ ವಿಟಂ ಪ್ರಹಸನತ ।
ತ್ಪರನೆನಿಸುಪವಂ ವಿದೂಷಕ
ನರ[4]ಸನ ಪಡಿ[4] ಪೀಠಮರ್ದಕಂ ನಾಯಕರೊಳ್ ॥ ೨೦೮

(ಅನಂತನಾಥಪುರಾಣಂ, ೭–೯೨.)

ಅನುನಾಯಕರೀ ನಾಲ್ವರು
ಮನುಕೂಲಂ ದಕ್ಷಿಣಂ ಶಠಂ ದುಷ್ಟಂ ನೆ ।
ಟ್ಟನೆ ನಾಯಕ[5]ರಿಂತೆಣ್ಬರ್
ಜನ[5]ಭರ್ತುಗೆ ಲಲಿತನಾಯಕಂಗೆ ಸಹಾಯರ್ ॥ ೨೦೯

(ಅನಂತನಾಥಪುರಾಣಂ, ೭–೯೩.)

ಅನುಕೂಲಾದಿಗಳೆಂಬ ಮಂದಪವನಂ ಚಂದ್ರಂ ವಸಂತಂ ಮುಗು
ಳ್ತ ನವಾಮ್ರಂ ಪಿಕ ಕೀರ ಭೃಂಗ ಕಳಹಂಸಶ್ರೇಣಿ ಕೈಕೊಂಡು ಬ ।
ರ್ಪನೆಗಂ ಮನ್ಮಥಚಕ್ರವರ್ತಿ ನಡೆದೀಬಂದಪ್ಪನೆಂಬಂತೆ ಬಂ
ದನಲಂಪಿಂ ಪೊಱಮಟ್ಟು ರಾಜಗೃಹಮಂ ಸಾಹಿತ್ಯರತ್ನಾಕರಂ ॥ ೨೧೦

(ಅನಂತನಾಥಪುರಾಣಂ, ೭–೯೪.)

ಮುಗುಳ್ಗಳ ಕಂಪಿದಚ್ಚನನೆಗಂಪಿದು ಪೂಗಳ ಕಂಪಿ[6]ದಿಲ್ಲ[6] ಮ
ಲ್ಲಿಗೆಗಳ ಕಂಪಿದುಬ್ಬರಿಪ ಜಾತಿಯ ಕಂಪಿದು ಬೇಱುವೇಱು ಸಂ ।
ಪಗೆಗಳ ಕಂಪಿದೆಂಬವೊಲಳಿಸ್ವನವೊಪ್ಪಿರೆ ಬಂದು ಕಂಪನೋ
ಲಗಿಸಿದುದೆ[7]ಯ್ದೆ[7] ಭೂಪತಿಗದೇನೆಲರೋ ಪೂಸಮಾಲೆಗಾಱನೋ ॥ ೨೧೧

(ಲೀಲಾವತಿ, ೨–೨೭.)

ಸಮಧಿಕ ಸೌಖ್ಯಮಾಗೆ ವನಲಕ್ಷ್ಮಿಗೆ ತಿರ್ದಿ ತಮಾಲಕೇಶಕೇ
ಶಮನಿನಿಸುಳ್ಳರಲ್ಚಿ ಕಮಲಾನನಮಂ ಸ್ತಬಕಸ್ತನಾಗ್ರದೊಳ್ ।

---

[1] ಸರೋ (ಅ). [2] ದ್ವೈದಿ (ಅ). [3] ತರ (ಅ). [4] ಸಂಗನು (ಅ). [5] ರಿವರೆಣ್ಬ ರುಮನು (ಅ). [6] ದಲ್ತು (ಖ.ಬ). [7] ತ್ರಿ (ಅ).

ರಮಿಯಿಸಿ ಪಾಟಲಾಧರ ಸುಧಾರಸಮಂ ಸವಿದಟ್ಟಿಱಿಂ ಲತಾಂ
ಗಮನಮರ್ದಪ್ಪಿ ದಕ್ಷಿಣವಿಟಂಗೆಣೆಯಾದುದು ದಕ್ಷಿಣಾನಿಲಂ ॥ ೩೧೨

ಅಳಿಮಾಲಾಕೇಶಮಂ ಮೆಲ್ಲನೆ ಬರೆತೆಗೆದಬ್ಜಾನನಾಮೋದಮಂ ಪೀ
ರ್ದು ಲತಾಂಗಾಲಿಂಗನಂ ಸಂಗಳಿಸಿ ಕೃತಕಶೈಲೇಂದ್ರಶುಂಭನ್ನಿತಂಬ ।
ಸ್ಥಲಮಂ ತನ್ನಿರ್ಝರಾಂಬುಸ್ಮರರಸಮೊಸರ್ವನ್ನೆಗಂ ತೀಱಿ ನಿಚ್ಚಂ ವನಶ್ರೀ
ಗೊಲವಂ ಮಾಡುತ್ತುಮಿರ್ಕುಂ ಚತುರವಿಟನವೋಲ್ ದಕ್ಷಿಣಾಶಾಸಮೀರಂ ॥*
(ಜಗನ್ನಾಥವಿಜಯಂ, ೬–೯೧.)

ನವನೀಲೋತ್ಪಲಲಕ್ಷ್ಮಿಯಂ ನಗಿಸಿ ಮಲ್ಲೀರಾಮೆ[1]ಯೊಳ್[1] ಮೇಳವಾ
ಡಿ ವನೇಜಾತಿನಿಯಂ ವಿಡಂಬಿಸಿ ವಿನೋದಂಬೆತ್ತು ಬಂದತ್ತು ಸ ।
ಬ್ಬವಕಾಱಂಗೆಣೆಯಾಗಿ ವಾರವನಿತಾಸೌಭಾಗ್ಯಘಂಟಾರುತಂ
[2]ಸುವಿಟಸ್ವೇದನವಾರುತಂ[2] ಕುಸುಮಚಾಪಜ್ಯಾರುತಂ ಮಾರುತಂ ॥* ೩೧೪
(ಜಗನ್ನಾಥವಿಜಯಂ, ೧೬–೧೧೦.)

ನಿಱಿಯ ಸೆಱಂಗನೆತ್ತಿ ಮಿಸುಪೊಳ್ದೊಡೆಯಂ ನಸುಸೋಂಕಿ ಮೇಲುದಂ
ತೆಱೆದು ಕುಚಾಗ್ರದೊಳ್ ಪೊರಳಿ ಹಾರಮನೀಡಿಱಿದಾಡಿ ನಾಡೆ ಬಾ ।
ಯ್ದೆಱೆಯನಲಂಪಿನಿಂ ಸವಿದು ತೋರಕುರುಳ್ಗಳನೊಕ್ಕಲಿಕ್ಕಿ ಮುಂ
ದಱಿಯದೆ ಸೂಳೆಗೇರಿಯೊಳೆ ಸಂಚರಿಪಂ ವಿಟನಂತೆ ಮಾರುತಂ ॥* ೩೧೫

ಸುಟಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುಱುಂಗಿ ಪೊಂ
ಪುಟಿಗೊಳುತಿರ್ದ ಸೋರ್ಮುಡಿಯೊಳೊತ್ತಿದ ಕತ್ತುರಿಯಂ ಕಲಂಕಿ ಮೈ ।
ವಟಿಯೊಳೆ ಮೇಲುದಂ ತೊಲಗೆನೂಂಕಿ ಕುಚದ್ವಯದೊಳ್ ಪಳಂಚಿ ಪೊ
ಕ್ಕುಡೊಳಿಱಿದಾಡಿ ಕೂಡಿದುದು ವಲ್ಲಭನಂತಿರೆ ಮಂದಮಾರುತಂ ॥* ೩೧೬

ವನಿತಾಕೇಶಕಲಾಪನವ್ಯಕುಸುಮಾಮೋದಂಗಳೊಳ್ ಕಮ್ಮಿಕ
ಮ್ಮನೆ ನಾರೀನಿಬಿಡೋನ್ನತಸ್ತನತಟಪ್ರೋದ್ಘಟ್ಟದೊಳ್ ಮೆಲ್ಲಮೆ ।
ಲ್ಲನೆ ಕಾಂತಾಸುರತಪ್ರಮೋದಬಹಳಸ್ವೇದಾಂಬುವಿಂ ತಣ್ಣತ
ಣ್ಣನೆ ಬೀಸಿತ್ತು ವಿಲಾಸಿನೀಸದನದೊಳ್ ಬಂದೊಂದು ಮಂದಾನಿಲಂ ॥* ೩೧೭

ಯುವತೀಸಂತಾನನಾನಾಚಲದಳಕಲಸಲ್ಲಾಸ್ಯಲೀಲಾಪ್ರಬಂಧಂ
ವಿವಿಧಾಗಾರಾಂಗಣಪ್ರಸ್ಫುರಿತಕೃತಕಕಾಸಾರಪಾನೀಯಭಂಗೋ ।

---

* ಈ ಚಿಹ್ನೆಯಿರುವ ಪದ್ಯಗಳು ನಾಲ್ಕನೆಯ ಆಶ್ವಾಸದಲ್ಲಿಯೂ ಬಂದಿವೆ.

[1] ಯಂ(ಅ). [2] ಸುವಿಟಸ್ವೈರರವಾರುತಂ (ಅ).

ದ್ಭವಬಿಂದುವ್ರಾತಶೀತಾವರಣನೊಲವಿನಿಂ ತೀಡಿದಂ ಸ್ತ್ರೀಕುಲೋದ್ಯ
ನ್ನವಕಸ್ತೂರೀಹಿಮಪ್ರೋನ್ಮಲಯಜಘುಸೃಣಾಮೋದಭಾರಂ ಸಮೀರಂ ॥* ೨೧೮
(ಗಿರಿಜಾಕಲ್ಯಾಣಂ, ೪-೧೨೮).

ಕಳಕೇಳೀಕೀರಪಾರಾವತಕುಹರಣವಾಚಾಲಮುಜ್ಜೃಂಭಮಾ[1]ನೋ
ಜ್ವ[1]ಳರಾಜಂ ನಿಷ್ಕು[2]ಟಾಂ[2]ಭೋರುಹನಿಲಯಜ[3]ಲಾದ್ರ್ರ್ಗಂ[3] ರತಿಶ್ರಾಂತನಿರ್ಯ ।
[4]ಲ್ಲಲನಾನಿಶ್ವಾಸಪುಷ್ಪಪ್ರಸರದಗರು[4]ಸೌರಭ್ಯಸಂದೋಹ ಭಾರಾ
ಕಳಿತಂ ಬಂದೊಯ್ಯನೇನೂದಿದುದೊ ಪಣವಧೂಗೇಹದಿಂ ಗಂಧವಾಹಂ ॥ ೨೧೯
(ಚಂದ್ರಪ್ರಭಪುರಾಣಂ, ೮-೪೩.)

ಬೆಟ್ಟದ ಮೇಲೆ ಬಂದು ಸಿರಿ ನಿಲ್ಕೆರವಿಲ್ಲದೆ ಕೂರ್ತು ನಲ್ಲರಿಂ
ತೊಟ್ಟಿಯನಾಗಳಂತೆ ತಿಳಿಗಾಟ್ಟಿವನುಯ್ಯಲಮೇಲೆ ಚಂದ್ರ ನೀ ।
ದರ್ಟ್ಟಿಸಿ ನೋಳ್ಪ ಕಾಂತೆಯರ್ಗೆ ಬಂದ ಬಸಂತದಮೇಲೆ ಬಿಚ್ಚತಂ
ನಾಟ್ಟುಗೆ ಜಾಗಮೆಂದು ಕೆಲಬರ್ ತಳಿರುಯ್ಯಲನೇಱಿ ಪಾಡಿದರ್ ॥ ? ೨೨೦

ಸುಯ್ಯೆಲರುಯ್ಯಲಾಡಿಸೆ ಮದಾಳಿಯನುಯ್ಯಲ ನುಣ್ಚರಂ ಸ್ಮರಂ
ಗುಯ್ಯಲವಿರ್ಗ್ಗೆ ಕಯ್ಯನಿರದೆಂಬವೊಲುಣ್ಮೆ ಮರಲ್ದು ನೋಟಕರ್ ।
ಪುಯ್ಯಲನೊಯ್ಯನಾಕೆಯೊಡನಾಡಿಗಳೊಳ್ ಕುಡೆ ಮುತ್ತಿನೈಸರಂ
ಮೆಯ್ಯೊಲೆಪಕ್ಕೆ ರಯ್ಯಮೆನೆ ತೂಗೆ ವಿಲಾಸದಿನುಯ್ಯಲಾಡಿದಳ್ ॥ ೨೨೧
(ಚಂದ್ರಪ್ರಭಪುರಾಣಂ, ೮-೪೭.)

ಮೂಡಿದುದಿತ್ತಲೊಂದಭಿನವಂ ಶಶಿಬಿಂಬಮೆನಿಪ್ಪ ಶಂಕೆಯಂ
ಮಾಡೆ ಮನಕ್ಕೆ ಮುದ್ದುಮೊಗಮುಜ್ವಲಚಂದ್ರಿಕೆಯಲ್ಲಿ [5]ನಿಂದು ಮೇ[5] ।
ಲಾಡುವ ಲೀಲೆಯಿಂದೊಲೆ[6]ಯೆ ಮ್ಯೆ[6] ಮೃಗಲಕ್ಷ್ಮಮೃಗಕ್ಕೆ ಗೋರಿಯುಂ
ಪಾಡುವ ಮಾಳ್ಕೆಯಿಂ ಬಳೆಯೆ ಗೀತರವಂ ತಳಿರುಯ್ಯಲಾಡಿದಳ್ ॥ ೨೨೨
(ಚಂದ್ರಪ್ರಭಪುರಾಣಂ, ೮-೪೮.)

ಪದನಖಕಾಂತಿ ತಾರಗೆಯ ಕಾಂತಿಯನೇಳಿಸೆ ಸುಯ್ಯ ಕಂಪೆಲ
ರ್ಗೊದವಿಸೆ ಕಂಪನಕ್ಷಿಗಳ ಚಂದ್ರಿಕೆ ಚಂದ್ರಿಕೆಯಂ ಪಳಂಚೆ ಗೇ ।
ಯದ ರುತಿ ಕಂತುಚಾಪರುತಿಯೊಳ್ ತಡಮಾಗೆ ಮುಖೇಂದುವಿಂದುವಿಂ
ಗಿದಿರಿಡೆ ಕಾಂತೆ ಮಿಂಚು ಪೊಳೆದಾಡುವವೋಲ್ ಪೊಳೆದುಯ್ಯಲಾಡಿದಳ್ ॥ ೨೨೩
(ಜಗನ್ನಾಥವಿಜಯಂ, ೧೬-೧೧೩.)

---

[1] ಣೊತ್ಪ (ಅ). [2] ಟುಂ (ಖ.ಬ). [3] ಳಂಧ್ರಂ (ಖ.ಬ). [4] ನ್ನಳನಾರೀ ಶ್ವಾಸಪುಷ್ಪಂ ಪ್ರಸವದಗಮು (ಖ.ಬ.). [5] ನೀಡುಮೋ (ಅ). [6] ಯಲೀ (ಅ).

ಈ ಪೊಸಸುಗ್ಗಿ ರಂಜಿಸಿದುದೀ ಪೊಸಜವ್ವನೆಯಿಂ[1]ದವೊಳ್ದ[1]ಸಂ
ವ್ಯಾಪಿಸೆ ಜಾಗಮಂ ಮೆಱೆದು ಕಾಮಿನಿ ಕಾಮಭುಜಾಗ್ರಮಂ ಜಯ ।
ಶ್ರೀ ಪರಿದೇಱಲೇಱಿ ತಳಿರುಯ್ಯಲನಾ ಖಚರೀಜನಂಗಳೊಳ್
ರೂಪಿಡೆ ತನ್ನ ರೂಪೊಲಿದು ಪಾಡಿದಳಚ್ಯುತನಂಕಮಾಲೆಯಂ ॥ ೩೨೪

(ಜಗನ್ನಾಥವಿಜಯಂ, ೧೬–೧೪೪.)

ಬೀಱುದುದೊಂದೆ ಬಾಯಿನಮೆ ಬಾಲಕಿ ಬಾಲಕಿಯರ್ಗೆ ಗಾಡಿಯಂ
ನೀಱರ ಕಣ್ಗೆ ಸೋ[2]ಲ್ತು[2] [3]ಶ್ರುತಿಗಿಂಚರ[3]ಮಂ ನನೆವಿಲ್ಲಪಾಂಗಮಂ ।
ಬಾಱನೆಯಂಬನಾಸ್ಯರುಚಿ[4]ಯಿಂ[4] ನವಚಂದ್ರಿಕೆಗಿಂಪನಾಳ್ದು ತಂ
ಪಾಱದ ಬಾಯ ಕಂಪನೆಳದುಂಬಿಗೆ ಬೀಱುತಮುಯ್ಯಲಾಡಿದಳ್ ॥ ೩೨೫

(ಲೀಲಾವತಿ, ೨–೩೯.)

ತುದಿಕೊಳಿಸಿರ್ದ ವಾಮಚರಣಂ ಮಣೆಯಂ ಬಲದಂಘ್ರಿ ಮೆಟ್ಟೆ ಮಿಂ
ಚಿದ ತೊಡೆ ರಜ್ಜುವಂ ಪಿಡಿದ ತೋಳವೊದಲ್ ಪೊಗರಂ ತುಳುಂಕೆ ನೂಂ ।
ಕಿದ ಮೊಲೆಯೊಡ್ಡು ಕೊಂಕಿ ನಿಮಿರ್ದೊಳ್ನಡು ಕಣ್ಗೊಳಿಪನ್ನಮುಯ್ಯಲೇ
ಱಿದಳಮೃತಾಂಶುವಕ್ತ್ರೆ ಕುಸಿದೇಱಿಸೆ ಮನ್ಮಥನಿಕ್ಷುಚಾಪಮಂ ॥ ೩೨೬

(ಅನಂತನಾಥಪುರಾಣಂ, ೮–೪.)

ಕಡೆಗಣ್ಣೊಂದಿಸುವಂತೆ ಚಂದ್ರಕರಮಂ ತಂಗಾಳಿಯಿಂ ಜೋಲ್ವ ಪೂ
ಮಿಡಿಯಂ ಜೊಂಪಿಸುವಂತೆ ಮುದ್ದುಮೊಗದಿಂ ಪೂರ್ಣೇಂದುಬಿಂಬಕ್ಕೆ ಧಾ ।
ಟಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪಂ ನುಗ್ಗಿ ನೂಂಕಲ್ಕೆ ಧೀಂ
ಕಿಡುವಂತಾಡಿದಳುಯ್ಯಲಂ ತರುಣಿ ತಂದಳ್ ಕಾಮನಿಂ ಪುಯ್ಯಲಂ ॥ ೩೨೭

(ಅನಂತನಾಥಪುರಾಣಂ, ೮–೬.)

ಇವಳೀ ಲೋಚನಮೆನ್ನ ಬಾಣಮಿವಳೀ ಪುರ್ವೆನ್ನ ಪೂವಿಲ್ಲು ಮಾ
ಯ್ದುವಳೀ ಸೋರ್ಮುಡಿಯೆನ್ನ ಕೇತನದ [5]ಚೆಲ್ವಂ ಕೊಂಡೊಡೇನೊಂದು[5] ದೋ ।
ಷವೆ ಎನ್ನೋಪಳ ರೂಪನೀಕೆ [6]ಗೆಲಲೇಕೆಂದಂಗಜಂ[6] ಕಟ್ಟಿ ತೂ
ಗುವವೋಲ್ ತೂಗಿದನುಯ್ಯಲೇಱಿಸಿ ವಿಟಂ ವಿಭ್ರಾಂತೆಯಂ ಕಾಂತೆಯಂ ॥ ೩೨೮

(ಲೀಲಾವತಿ, ೨–೪೧.)

ತೂಗಿ ನಿಜೇಶನಾ ಸೊಬಗನಟ್ಗಿಸೆ ನೋಟ್ಪವರುತ್ತಮಾಂಗಮಂ
ತೂಗಿ ತಗುಳ್ದು ನೋಟ್ಪ ವಿಟಕೋಟಿಗೆ ಮನ್ಮಥನಾತ್ಮಬಾಣಮಂ ।

---

[1] ದೆನರ್ ಜ (ಅ). [2] ಲ್ತು (ಖ). [3] ಸುತಿಗಿಂದೊಳ (ಅ). [4] ಯಂ (ಅ).
[5] ಚೆಲ್ವಂ ಕೊಂಡವೆನ್ನೊಂದು (ಖ.ಬ). [6] ಸೆಳೆದಳ್ಗೇಕೆಂದಜಂ (ಖ.ಬ).

ತೂಗೆ ಪೋದಟ್ಟು ಮಾಂದಳಿರ ತೋರಣಮಂ ಸುಟಿತಪ್ಪ ತಂಬೆಲರ್
ತೂಗೆ ವಿಲಾಸದಿಂದೆ ಪೊಸಪೊಂಬೆಸದುಯ್ಯಲನೊರ್ವಳಾಡಿದಳ್ ‖ ೩೨೯

ನೆರೆದಳಿ ಪಾಱುವಂತಿರೆ ಕುರುಳ್ ಮೊಲೆಗಳ್ ಪೊಣರ್ವಕ್ಕಿ ಪಾಱುವಂ
ತಿರೆ ಪೊಳೆವಕ್ಷಿಗಳ್ ಚಳಚಕೋರಯುಗಂಗಳೆ ತಳ್ತು ಪಾಱುವಂ ।
ತಿರೆ ಶಿಖಿ ಪಾಱುವಂತಿರೆ ಒಟಲ್ಮುಡಿ ತಾನಲರಂಬು ಪಾಱುವಂ
ತಿರೆ ಮಿಗೆ ಕೀಱು ಪಾಱಿ ಗಗನೇಚರಿಯಂತೊಲೆದುಯ್ಯಲಾಡಿದಳ್ ‖ ೩೩೦

(ಲೀಲಾವತಿ, ೨–೩೮.)

ಸಿರಿಯ ವಿಲಾಸಮುಂ ಶಚಿಯ ಸಂಪದಮುಂ ರತಿಯೊಂದು ರಾಗಮುಂ
ಗಿರಿಜೆಯ ಗಾಡಿಯುಂ ಮದನ ಕೇಳ್ದೆಳಸುತ್ತಿರೆ ಕದ್ದ ನಿಲ್ಲ ಮೈ ।
ಸಿರಿಯೆಡೆಗೊಂಡನೇ ಕಱೆಯ ಚಂದ್ರಮ ಚಂದ್ರಿಕೆ ಚೈತ್ರದಿಂದೆ ಪೀ
ವರಕುಚೆ ತೋರಣಂ ನುಗುಳ್ದು ಗೆಲ್ದ ಪಳೆಂಬಿನಮುಯ್ಯಲಾಡಿದಳ್ ‖ ೩೩೧

(ಅನಂತನಾಥಪುರಾಣಂ, ೮–೭.)

ಇದು ನಿನ್ನೀಯೆಣನೆನ್ನೀಕ್ಷಣಕೆ ಸೆಣಸಿ [1]ತಳ್ವೊಯ್ದು ನಿಂದಿರ್ದ[1] ದರ್ಪ
ಕ್ಕಿದು ನಿನ್ನೀಯಾಲವೆನ್ನೀಯಧರದಳದೊಳಾದೀರ್ಷೆಯಿಂ ಪಣ್ತು ಗರ್ವ ।
ಕ್ಕಿದು [2]ನೀನೆನ್ನಾ[2]ಸ್ಯದೊಳ್ ಮಚ್ಚರಿಸುವ ಮಱುಕಕ್ಕೆಂದು ಕಾಲ್ಗಾಲೊಳೀವಂ
ದದೆ ಚಂ[3]ದ್ರಂಗುತ್ಪ[3]ಹಾರಂಗಳನೊದೆದೊಲವಿಂದುಯ್ಯಲಾಡುತ್ತುಮಿರ್ದಳ್ ‖

(ಲೀಲಾವತಿ, ೨–೪೦ )

ನಯನಮರೀಚಿಯುಂ ಕಬರಿಕಾಂತಿಯುಮಿರ್ದೆಸೆಗಿಂದ್ರನೀಲಮಾ
ಲೆಯ ವರಮೌಕ್ತಿಕಾವಳಿಯ ರಜ್ಜುಗಳಂತಿರೆ ಚಂದ್ರನುಂ ರತಿ ।
ಪ್ರಿಯನುಮದೇಂ ತೊಡರ್ಚೆ ಪಿಡಿದೋಜೆ ವಿರಾಜಿಸೆ ತೂಗುವಂಗಥಂ
ಗಿಯೊಳೊಲೆದುಯ್ಯಲಾಡಿ ಕಡು ಬಾಡಿಸಿದಳ್ ವಿಟರಂತರಂಗಮುಂ ‖ ೩೩೩

ರತಿಯುಂ ಕಾಮನುಮುಂಬರೇಚರವಿಲಾಸಶ್ರೀಯನೊಲ್ದಂತೆ ಹೃ
ತ್ಪತಿ ಕುಳ್ಳಿರ್ದೆಡೆಗೊ[4]ಟ್ಟೊಡಂದು ತೊ[4]ಡೆಯಂ ತಳ್ತೇಱಿ ನಲ್ಲಳ್ ಪ್ರಥಾ ।
ಪ್ಲುತನೇತ್ರಂ ತೆರೆ ಸುತ್ತೆ ಪೀಠಮಣಿಮಂಚಂ ಚೆಲ್ವನಾಗುಯ್ಯಲಂ
ತತರಾಗಾಮೃತವಾರ್ಧಿಯೊಳ್ ಮಗಲೆವಿಟ್ಟೀಸಾಡುವಂತಾಡಿದಳ್ ‖ ೩೩೪

(ಅನಂತನಾಥಪುರಾಣಂ, ೮–೫.)

---

[1] ತಾಂದೆರ್ಚನೋಡಿಪ್ಪೊಂದು (ಅ). [2] ನಿನ್ನೀನಾ (ಖ.ಬ). [3] ದ್ರಾಂಶುಪ್ರ (ಖ.ಬ). [4] ಟ್ಟಬಟ್ಟದೊ (ಅ.)

ಪವಳದಿನಿಂಗಡಲ್ ಶಫರದಿಂ ಕೊಳನುನ್ಮದಭೃಂಗನಾದದಿಂ
ದವಿರಳಪುಷ್ಪಭೂಜಮೆಸೆವಂತಿರೆ ಚಂದ್ರಿಕೆ ರತ್ನಭೂಷಣಾಂ ।
ಶುವಿನಲರ್ಗಣ್ಣ ಮಾರ್ಪೊಳೆಪಿನಿಂ ಮೃದುಗೇಯದಿನೊಯ್ಯನುಯ್ಯಲಾ
ಡುವ ಲಲಿತಾಂಗಿ ತನ್ನೆಡೆಗೆ ನೀಱರ ಚಿತ್ತಮನುಯ್ಯಲಾಡಿದಳ್ ॥ ೩೩೫

ನೋಡುವನೇಕ ಸದ್ವಿಟಜನಂಗಳ ಪೆಣ್ಗಳ ಕಣ್ಗಳಾಡೆ ಕೊಂ
ಡಾಡುವ ತತ್ಸಖೀಜನದ ಚಾಗದ ಭೋಗದ ರಾಗವಾಡೆ ತೂ ।
ಗಾಡುವ ಬಾಲಕೀವ್ರಜದ ಕಂಕಣಝುಂಕೃತಿ ಭೋಂಕನಾಡೆ ತಾ
ನಾಡಿದಳುಯ್ಯಲಂ ಮುಖಶಶಿಪ್ರಭೆ ಮುಚ್ಚಿ ಮುಸುಂಕೆ ಚಂದ್ರನಂ ॥ ೩೩೬

(ಗಿರಿಜಾಕಲ್ಯಾಣಂ, ೪–೧೫೯.)

ಏಱಿದ ಮಣಿಯುದಯನಗಂ
ತೋಱಿದ ಮುಖಬಿಂಬವಿಂದುಬಿಂಬಮಪಾಂಗಂ ।
ಮಿಾಱಿದ ಚಂದ್ರಿಕೆಯೆನೆ ಕಳೆ
ಯೇಱಿದ ಪಡಿಚಂದ್ರನಂತೆ ಸೌಂದರಿಯೆಸೆದಳ್ ॥ ೩೩೭

(ಗಿರಿಜಾಕಲ್ಯಾಣಂ, ೪–೧೫೮.)

ದುಗುಲಮನುಟ್ಟು ತೊಟ್ಟು ಪೊಸಮುತ್ತನೆ ಚಂದನದಣ್ಪನಿಕ್ಕಿ ಮ
ಲ್ಲಿಗೆಯ ಸರಂಗಳಂ ಮುಡಿದು ಚಂಪಕಮಾಲೆಯನೆತ್ತಿ ಮೇಗೆ ತುಂ ।
ಬಿಗಳೆಡೆಯಾಡದಂತಱಿಯಲಾಗದವೋಲ್ ನವಚಂದ್ರಿಕಾಮರೀ
ಚಿಗಳೊಡಗೂಡಿ ಪೋದಳಭಿಸಾರಿಕೆ ಮುತ್ತಿನ ಬೊಂಬೆಯಂದದಿಂ ॥ ೩೩೮

(ಲೀಲಾವತಿ, ೨–೩೭.)

ಅಂಗಜನೈದು ಶರಂಗಳ ಬಂದ ಬ
ನಂಗಳ ಪುಟಿಲ ತಳಿರುಯ್ಯಲಚ್ಚವೆ ।
ಳ್ದಂಗಳ ಮೇಲೆ ಸಿರಿ ನಿಲ್ಕೆ ॥ ೩೩೯

(ಲೀಲಾವತಿ, ೨–೩೪–೧.)

ಮನಮನಂಟುವ ರೂಪು ದನಿ ನಗೆ ಮೆಲ್ಪು ತಂ
ಪನುಗುಣಮುಳ್ಳ ವಧುವಿರೆ ಬೇಱೆ ಪೂ
ವಿನ ಸರ[1]ಲೇ[1]ಕೆ ಮದನಂಗೆ ॥ ೩೪೦

(ಲೀಲಾವತಿ, ೨–೩೪–೨.)

ಜಾತಿಸೂಳೆಗೆ ರಣಭೀತನ ಪುಸಿನುಡಿ
ವಾತನ ಖಳನ ಕೆಳೆಯನ ಬಡಗನ
ಬೂತಿನ ಮಾತು ದಿಟಮಲ್ತು ॥ ೩೪೧

(ಲೀಲಾವತಿ, ೨–೩೪–೩.)

---

[1] ಲದೇ (ಅ.ಖ).

ಪತ್ತಿದ ಬೊಜಗರ ಚಿತ್ತವ ಕಿಡಲೀಯು
ದಿತ್ತುದೆ ಕೋಟಿ ತನಗೆಂಬ ಸೂಳೆಯು
ಪಿತ್ತಿಲೊಳಿರದೆ ಸುರಭೂಜ ‖ ೩೪೨

(ಲೀಲಾವತಿ, ೨–೩೪–೪.)

ಎಱಗಿಸುವುದು ಗೆಟ್ಟು ಪೆಱಗೆ ತಾನೆಱಗೆ ಪೊ
ಕ್ಕಱಿಯಲೆ ಪೋಗಿ ಮೂಗರಿವಡೆದರ
ತೆಱನಪ್ಪುದೆಲಗೆ ಬೆಲೆವೆಣ್ಣೆ ‖ ೩೪೩

(ಲೀಲಾವತಿ, ೨–೩೪–೫)

[1]ನಯುವಿದನೊಪ್ಪುವ ಬಿಯಕಾಱನೊಳ್ಳಿದ
ಪ್ರಿಯತಮನಾಗೆ ತನ್ನ ಮುನ್ನೋಂತ ನೋಂ
ಪಿಯ ಫಲವೈಸೆ ಬೆಲೆವೆಣ್ಣೆ ‖ ೩೪೪

(ಲೀಲಾವತಿ, ೨–೩೪–೮.)

ಕೆಡುವುದು ಕುಡದೊಡೆ ನಡೆಯದು ಪಿರಿದೀಯೆ
ಸೊಡರ್ಗುಡಿಗೆಣ್ಣೆಯೆಱೆವಂತೆ ಬೆಲೆವೆಣ್ಗೆ
ಕುಡುವುದು ಹದಕೆ ಚದು[2]ರಿ[2]ಗಂ ‖ ೩೪೫

(ಅನಂತನಾಥಪುರಾಣಂ, ೮–೨೬.)

ಕಂಪೋಡಿದಲರ್ಗಳನಿಂಪೋಡಿದೊಲುಮೆಯಂ
ಸಂಪತ್ತು ಪೋದ ಬೊಜಗನ ಪಿಡಿದಿರ್ಪ
ಗಾಂಪು ಬೇಡೆಲೆಗೆ ಬೆಲೆವೆಣ್ಣೆ ೩೪೬

(ಲೀಲಾವತಿ, ೨–೩೪–೭.) .

ನೆಲೆವೊಲೆಯುಳ್ಳಿನಂ ನೆಲೆಯಕ್ಕು ಪೋಪರ್ಗೆ
ಎಲೆಪಣ್ತು ಬಿರ್ದ ಬಟ್ಟೆಯ ಮರನಂತೆ
ವೊಲೆ ಬಿರ್ದ ಬಟಿಕೆ ಬೆಲೆವೆಂಡಿರ್ ‖ ೩೪೭

(ಲೀಲಾವತಿ, ೨–೩೪–೯.)

ಪರಿಹಾಸವೊಪ್ಪುವಾದರ ನೆಲೆ ಗೀತವು
ಕ್ಕರಗೊಟ್ಟಿಯಿಲ್ಲದಿರೆ ನಾಡ ಕೋ[3]ರಿ[3]ಯ ಕೊ
ಟ್ಟರವದು ಸೂಳೆವನೆಯಲ್ತು ‖ ೩೪೮

(ಲೀಲಾವತಿ, ೨–೩೪–೧೦.)

---

[1] ಬಿಯಕಾರನೊಪ್ಪುವ ಪ್ರಿಯತಮನಾಗೆ ಪೆ ।
ರ್ಮೆಯು ಬೆಳಸು ಫಳವಾ ಪೆಣ್ಣು ನೋಂತನೋಂ ।
ಪಿಯ ಫಲವೆಲಗೆ ಬೆಲೆವೆಣ್ಣೆ ‖ (ಅ).

[2] ರಿಂ (ಇ.ಬ).

[3] ಟಿಲೆ (ಅ).

ಅನುವಿಪ ತಾಯ ಮನ್ನಿಸುವ ತಂದೆಯ ಕಾಯ್ಪಿನೊಳೆಕ್ಕೆಗುಟ್ಟುವ
ಕ್ಕನ ಪದಪೆತ್ತ ಬೈವ ಕಿಱುದಂಗಿಯ ಕಣ್ಣೊಳೆ ಕೀಱು ಕಲ್ಪಿಪ ।
ಣ್ಣನ ಬಿಯವಿಲ್ಲದವ್ವಳಿಪ ತಮ್ಮನ ನೆತ್ತಿಗೆ ಮೆಯ್ಯನೊಡ್ಡಿ ನಿ
ನ್ನನೆ ಪಿಡಿದಿರ್ದ ನಲ್ಮೆಗಿದು ತಕ್ಕುದೆ ನಲ್ಮೆಗೆ ದೋಷಮಾಗದೇ ॥ ೩೪೯

ಅಗಿದೆನಗಿಂತು ಸಂಜೆಯನೆ ಸಾಧಿಸಿ ಸೂರುಳಿದಾಗಳೇಂ ಗಳೂ
ಳಗವೆನಗಿಲ್ಲ ಪೊಟ್ಟುಗುಣದಿಂ ನಿನ[1]ಗಾಂ ನೆಱೆಯೊಲ್ದೆ[1] ಕಾವನಾ ।
ಣೆ ಗಡೆಳಮಾವಿನಾಣೆ ಗಡ ಮಲ್ಲಿಗೆಯಾಣೆ ಗಡಿಂದುಬಿಂಬದಾ
ಣೆ ಗಡ ಬಸಂತನಾಣೆ ಗಡ ಬ[2]ಲ್ಲಡೆ ನಾನಟಿಗಂಡಳೆಂಬುದಂ[2] ॥ ೩೫೦

(ಲೀಲಾವತಿ, ೨-೫೬.)

ನೋಡೆನೆ ಕಣ್ಗಳಂಗವಿಸಲಾರ್ಪುದೆ ಗಂಡರ ಗಾಡಿಗೊಲ್ದು ಮಾ
ತಾಡೆನೆ ಬೆಂದ ಬಾಯ್ ಪೆಱಗೆ ಮುಚ್ಚಿ ಮುಸುಂಕಿದೊಡಿಚ್ಚೆಕಾಱರೊಳ್ ।
ಕೂಡೆನೆ ತೋಳ್ಗೆ ಕೊಕ್ಕರಿಕೆ ಪುಟ್ಟಿದೊಡೆನ್ನಯ ಲೇಸನೆನ್ನೊಳ
ಪ್ಕಾಡಿಪುದಟ್ಟಿಯೇ ಹರಸಿ ಹುಟ್ಟಿದೆನೇ ನಿನಗೆಂದು ವಲ್ಲಭಾ॥ ೩೫೧

(ಅನಂತನಾಥಪುರಾಣಂ, ೮-೨೬.)

ಒಡಲುಂ ಜೀವಮುಮೊಂದಿದಂ[3]ತೆ ಮಲರುಂ ಕಂಪುಂ ಮಲರ್ದಂತೆ ಓ[3]
ತೊಡಗೂಟಂ ಸಮಸಂದ ನಮ್ಮೊಳಗೆ ತಪ್ಪಂ ಮಾಟ್ಪ ನಿನ್ನೊಂದು [4]ಸ್ಪೈ ।
ತಿಡುತಿರ್ಪಾನಿನಿತೆಯ್ದದೇಂ[4] ಕುಟಿಲ ಸೂ[5]ರು[5]ಳ್ ನಲ್ಮೆಯೇ ನಲ್ಮೆಯು
ಳ್ಳಡ[6]ದೇಕಪ್ಪುದು ವೀಣೆಯಂ ಪಱಿಯೆ ಪಾಡುಂ ತೀರ್ದುದಿಂ[6] ಸಾಲದೇ ॥ ೩೫೨

(ಅನಂತನಾಥಪುರಾಣಂ, ೮-೧೭.)

ಮನೆಗೆಲ್ಲಂ ಪಗೆಯಾದೆನಟ್ಟಿಗೆ ಕರಂ ಗೆಂಟಾದೆನಿಂ ಮೆಚ್ಚಿದಂ
ಗನೆಯು[7]ರ್ಗೇಳ್[7]ದಳಾದೆನೋಪ ಗುಱಿಯಾದೆಂ ಪಂಚಬಾಣಕ್ಕೆ ಪ ।
ದ್ಮಿನಿಯಾದೆಂ ವಿಧುವಿಂಗೆ ನಿನ್ನ ಕತದಿಂ ಕೇಳಟ್ಟಿಕಾಱಿಂಗೆ ಕೂ
ರ್ತನಗಿಲ್ಲಿಂ ಪಿರಿದಕ್ಕುಮೆಂದು ಸುರಿದಳ್ [8]ಭೋರೆಂದು[8] ಬಾಷ್ಪಾಂಬುವಂ ॥ ೩೫೩

(ಲೀಲಾವತಿ, ೨-೬೧.)

ನಸು ನಿಮಿರ್ದಿರ್ದ ಬಾಯ್ ನಿಮಿರ್ದ ಗೋಣೆವೆಯಿಕ್ಕದ ನೋಟಮೊಯ್ಯ
ದೆಸೆಗೊಱಗಿರ್ದ ಮೈ ಜಘನದಲ್ಲಿಯ ಕೈ ಮನವಟ್ಟ ಚೇಷ್ಟೆ ಕ । [ನೊಂ

---

[1] ಗೊಲ್ದುದು ಮಾತೆ (ಅ). [2] ಲ್ಲೊಡವಾನಟಿಗಂಡರೆಂಬುದಂ (ಅ). [3] ತಿರಲು ಕಂಪುಂ ಪೂವರಲ್ದಂತಿರೋ (ಅ). [4] ಬಾಯ್ಪಿಡುವೀನಾದಮಿದ್ದೈದದೇ (ಅ). [5] ಳ್ಗ (ಖ.ಬ). [6] ದು ನಾಳಿಯೆ ಬೀಣೆಯುಂ ಪಱಿದು ಪಾಡುತ್ತಿರ್ದುದುಂ (ಖ.ಬ). [7] ರ್ಗೊಳ್ಳಿ (ಅ). [8] ಬೆಂಬೆದ್ದು (ಕ.ಖ.ಬ).

ಣ್ಗೆಸೆದಿರೆ ಸುಯ್ಯಲುಂ ಮಱೆದು ಚಿತ್ರದ ಪೆಣ್ಣವೊಲೊಂದು ಬಾಗಿಲೊಳ್
ಸಸಿಮುಖಿ ನೋಡುತಿರ್ದಳಿನಿಯಂ ತಡೆದಿರ್ದೊಡೆ ಬರ್ಪ ಬಟ್ಟೆಯಂ ॥ ೩೫೪

ಬಂಬಲಬಾಡಿ ಮುಂಬಗಲನೆಯ್ದಿದ ನೆಯ್ದಿಲವೋಲ್ ಕುರುಳ್ಗಳಾ
ತುಂಬಿಯ ಮಾಲೆವೋಲ್ ಪೊಳೆಯೆ ದೂರಿಸಿ ತನ್ನನೆ ಕಣ್ಣನೀರ ಘ
ರ್ಮಾಂಬುವ ಕಾಟ್ಪುರಂಗಳೊಳೆ ತೇಂಕುವ ಕಾಂತೆಯನೆಯ್ದಿವಂದು ಚಂ
ದ್ರಂಬೊಲಲರ್ಚಿದಂ ಕರದಿನಪ್ಪಿ ಕಲಾನಿಳಯಂ ಮನಃಪ್ರಿಯಂ ॥ ೩೫೫

ನುಡಿದಂ ದೈನ್ಯದ ಮಾತನಾತನಿರದೆಟ್ಟಿಳ್ ಮೌನದಿಂ ಮುಗ್ಧೆ ಕಾ
ಲ್ವಿಡಿದಂ ವಲ್ಲಭನೋಪಳೆದ್ದೊದೆದು ಪೋದಳ್ ಮಿಾಱಿದಳ್ ಬಲ್ಮೆಯಿಂ ।
ಪಿಡಿದಾತ್ಮೇಶ್ವರನಿಕ್ಕಿದಂ ಕೊರಲೊಳೊಂದಂ ಹಾರಮಂ ಕಾದಲಳ್
ನಡುಗುತ್ತಿಕ್ಕಸರಕ್ಕದೊಂದು ಸರಮಂ ಬಾಷ್ಪಾಂಬುವಿಂದಿಕ್ಕಿದಳ್ ॥ ೩೫೬

(ಅನಂತನಾಥಪುರಾಣಂ, ೮-೯.)

ಮುಳಿವೆಂ ನಾನಾರ್ಗೆ ನನ್ನಂ ತಿಳಿಪುವ ಪಿರಿದುಂ ದಂದುಗಂ ಬೇಡವಿನ್ನಾಂ
ಮುಳಿಯೆಂ ನಿನ್ನಾಣೆ ನಿನ್ನೀ ನವನಖಪದಮಂ ಕುಂಕುಮಾದ್ರಾಂಕಿತೋರ ।
ಸ್ಥಳಮಂ ಸೊಪ್ಪಾದ ಬಿಂಬಾಧರಮನಿನಿತುಮಂ ಕಂಡು ಕಂಡಿನ್ನುಮಿನ್ನೇಂ
ಮುಳಿಸಿನ್ನೇಂ ಲಲ್ಲೆಯಿನ್ನೇಂ ಪುರುಡುಗಳೆನುತುಂ ತೀವಿದಳ್ ಕಣ್ಣನೀರಂ ॥ ೩೫೭

ಇನಿತುಂ ನಂಬೆಲೆ ಮನ್ಮನೋರಮಣಿ ನಿನ್ನೆನ್ನಂತರಂ ನೋಪ್ಪೊಡೀ
ತನು ಬೇಱಿಲ್ಲದೆ ಜೀವಮೊಂದೆಮಗೆನಿಪ್ಪೀ ಮಾತು ತಾನೀಗಳೋ ।
ಪನೆ ಕೇಳ್ ನಿಶ್ಚಯಮಾದುದಲ್ಲದೊಡೆ ನಿನ್ನೀ ಮೆಯ್ಯೊಳೊಂದಿರ್ದ ನೂ
ತನಮಾಗಿರ್ಪ ನಖಕ್ಷತವ್ಯಥೆಗೆ ಪೇಱೆನ್ನೀ ಮನಂ ನೋವುದೇ ॥ ೩೫೮

(ಶೃಂಗಾರರತ್ನಾಕರಂ, ೩-೫೫.)

ನೆಱೆ ಬಂದೀ ಮಧುವೆನ್ನನಂಗಭವನೆನ್ನಂ ಚಂದ್ರನೆನ್ನಂ ದಲೆಂ
ದಱಿಯೆಂ ಕೇವಳನೆನ್ನನೆಂದಱಿಯದಂದೀಗಳ್ ವಿಯೋಗಾರ್ತೆಯಂ ।
ನೆಱೆ ಬಂದೀ ಮಧುವೆನ್ನನಂಗಭವನೆನ್ನಂ ಚಂದ್ರನೆನ್ನಂ ಕೊಲಲ್
ತಱಿಸಂದಿರ್ದಪರಾತನೊಳ್ ನೆರಪು ನೀಂ ಶ್ರೀರೂಪಕಂದರ್ಪನೊಳ್ ॥ ೩೫೯

(ಲೀಲಾವತಿ, ೨-೪೪.)

ಮುಳಿಯಲ್ವೇಡೆನ್ನನೇ ನೀಟ್ಕರಿಸದೆ ತಿಳಿಯೆಂದೆನ್ನನೇ ಬಾರನೇ ಮೇಣ್
ತಿಳಿಪಲ್ ಬೋಳೈಸನೇ ಕಾಲ್ವಿಡಿಯನೆ [1]ಪಿ[1]ಡಿದೆಟ್ಟಿಪ್ಪಿಕೊಂಡಾಗ[2]ಳೀ[2]ಗಳ್ ।

[1] ಸಿ (ಅ). [2] ದೀ (ಅ).

ಕೆಳದೀ ನೀಂ ಬಲ್ಲೆಯಿಂತೆಂದನುವಿಸಿದಪೆ ಬೇಸತ್ತೆನಾಂ ನಲ್ಲನಿನ್ನೇ
ಕೊಳಗಪ್ಪಂ ನೀನು[1]ವಿಾಗಳ್[1]ಕೊಲುವ ಮದನನುಂ ಬಲ್ಲಿರಾನೆತ್ತ ಬಲ್ಲೆಂ ‖ ೩೬೦
(ಅನಂತನಾಥಪುರಾಣಂ, ೮-೧೨.)

ಮುನಿಸಂ ಮೆಯ್ದೋಱಸೆಂ ಕಂಡೊಡೆ ಕರಕರಿಸೆಂ ಪೋಯ್ದೊಡಂ ಬಯ್ಯೆನೇನೆಂ
ದನನಂ ಮಾರ್ಕೊಳ್ಗೆನೀ ಸಾವಿನ ಸಪಿಯುಱ[2]ಯೆಂ ತಂದು ನೀನೊಮ್ಮೆ[2] ಕೂಡಾ ।
ತನನಾತಂಗೀವ ಮುಯ್ಯಂ ನಿನಗೆ ಕುಡುವೆನೇಟಕ್ಕ ಪೋಗೆಂಬುದುಂ ಭೋಂ
ಕನೆ [3]ಬಂದೊಲ್ದಪ್ಪಿದಂ ಚುಂಬಿಸಿದನವನಿದಂ[3] ಕೇಳುತಿರ್ದಾತ್ಮನಾಥಂ ‖ ೩೬೧
(ಅನಂತನಾಥಪುರಾಣಂ, ೮-೧೩.)

ಅರಗಿಳಿ ಮಾತನಾಡಿದುದು ನಿನ್ನೊಡನಂತೆಳಸುತ್ತಮಿರ್ದ ನೀಂ
ಪುರುಳಿಯ ಕೂಡೆ ಪಾರಿವದ ಲಲ್ಲೆಗೆ ಭುಲ್ಲಿಸುತಿರ್ದೆಯೆಂದು ಮಂ ।
ದರಗತಿಯಿಂದೆ ಹಂಸನೊಡನಾಡಿ[4]ದಳೆ[4]ಂದತಿ ಕೋಪದಿಂ ಪ್ರಿಯಂ
ಪುರುಡಿಸೆ ನಕ್ಕು ಚುಂಬಿ[5]ಸಿದೆನಾನವನೊಳ್ ನಗುತುಂ ತಳೋದರೀ[5] ‖ ೩೬೨
(ಅನಂತನಾಥಪುರಾಣಂ, ೮-೪೬.)

ಇನಿಯಂ ಕೂರ್ಮೆಯ ಕೂಟದೊಳ್ ಗುರು ಕಳಾಭಿಪ್ರಾಯದೊಳ್ ತಂದೆ ತಾಯ್[6]
ತನುಸಂಸ್ಕಾರವಿಳಾಸದೊಳ್ ಸಖಿ ಸುಖಾಳಾಪಂಗಳೊಳ್ ಬಂಧು ನೆ ।
ಟ್ಟನೆ ಮುಟ್ಟಿರ್ದೆಡೆಯೊಳ್ ವಿಧಾತ್ರನೆನಗಿನ್ನೇಟೇಱು ಜನ್ಮಕ್ಕಮಾ
ತನೆ ಚಿತ್ತಪ್ರಿಯನಕ್ಕೆ ಸೂಕ್ತಿನಳಿನೀಹಂಸಂ ಸರೋಜೇಕ್ಷಣೇ ‖ ೩೬೩
(ಅನಂತನಾಥಪುರಾಣಂ, ೮-೪೭.)

ನನೆಯಾಗಿರ್ದಾಂ ಮನೋನಾಥನ ಸಿರಿಮುಡಿಯೊಳ್ ವಕ್ಷದೊಳ್ ಹಾರಮಾಗಿ
ರ್ದು ನಿತಂಬಾಭಾಗದೊಳ್[6]ವೇಷ್ಟಿ[6]ಸಿದ ದುಗುಲಮಾಗಿರ್ದು ಸರ್ವಾಂಗದೊಳ್ ಚಂ
ದನದಣ್ಪಾಗಿರ್ದು ಬಿಂಬಾಧರದೊಳರುಣಿಮಚ್ಛಾಯೆಯಾಗಿರ್ದು ಕಾಯಲ್
ನೆನೆವೆಂ ನೋಡಕ್ಕ ತಳ್ತಪ್ಪಿದೊಡೆ ಪೆಱರ ಕಣ್ಣೇಱನಾಶಂಕೆಯಿಂದಂ ‖ ೩೬೪
(ಅನಂತನಾಥಪುರಾಣಂ, ೮-೧೬.)

ಪದಪದನಾಗಿ ಪಾಂಗಱದು ಬರ್ದೆಯರಂ ತನಗಾಗುಮಾಡಲಾ
ಱದೆಯುಮಲಂಪು ಪೋಗೆ ಕುಡಲಾಱದೆಯುಂ ಬಸವಂ ನಿಮಿರ್ಚಲಾ ।
ಱದೆಯುಮದೆಂತೊ ಕೆಮ್ಮನೆ ಕೆಲರ್ ಪುಱುವಾನಿಸರಕ್ಕಟಾ ಚದುರ್
ಚದುರೆನುತಿರ್ಪರಾ ಚದುರದೇಂ ಕರಿದೊ ಬಿಳಿದೋ ಕದಂಬಮೋ ‖ ೩೬೫

---

[1] ಮಾನುಂ (ಅ). [2] ದೆಂ ಸಾಲದೇ ತಂದು (ಅ). [3] ಬಂದಂ ತಳ್ಪಿದಂ ಚುಂಬಿಸಿದನೊಲದು (ಅ). [4] ದೆಯೆಂ (ಅ). [5] ಸುವೆನಾನುಟುತುಂ ಪೊಗಮಿಾವನಂತವಂ (ಅ). [6] ಪಂಟಿ (ಅ).

ಇತ್ತೊಡೆ ಬೇಟವೀಯದೊಡೆ ಕಾಟಮದುಂ ಬೆಲೆವೆಣ್ಗೆ ಬಾೞಕಂ
ಬತ್ತುವ ಬೇಟಮಂ ಸುಡು ಪರಾ[1]ಕಿ[1]ಯ ನೋಂಪಿಯ ಗಂಡ[2]ರಿರ್ವರೊಳ್[2] ।
ಕತ್ತುರಿ ಕಪ್ಪುರಂ ತೊಡಿಗೆ [[3]ನಾಟು[3]]ವದಂಬುಲವಚ್ಚವಾಸಿಗಂ
ಸುತ್ತುವ ಬಣ್ಣಸಣ್ಣಮಿವು ಬೇಟದ ಕೂಟದ ಸುಗ್ಗಿ[4]ಯಲ್ಲವೇ[4] ॥ ೩೬೬

(ಅನಂತನಾಥಪುರಾಣಂ, ೮-೪೮.)

ಹರ[5]ದನ[5] ಬ[6]ಡ್ಡಿ[6]ಗೊಟ್ಟೊಡವೆ ರಾಜಕುಮಾರನ ತೇಜದೇೞ್ಗೆ ನಾಣ್
ಬಿರುದನ ಚಿತ್ರವಿದ್ಯೆ ಕವಿಪಂಡಿತರೋದಿನ ಕೊಂಕು ಚೆನ್ನಪೋಂ ।
ಗರ ಕುಡಿಮುಂಜೆಱಂಗು ನಿಡುಬೈತಲೆ ಬಾೞ್ತೆಯೆ ತೋರ್ಪೊಡಂತವಂ
ಕರಹದ ಸೂಳೆ ಸುತ್ತುವಳೊ ಕುತ್ತುವಳೋ ಮನೆವಾರ್ತೆ[7]ಗೆಯ್ವ[7]ಳೋ ॥ ೩೬೭

(ಅನಂತನಾಥಪುರಾಣಂ, ೮-೪೯.)

ಸೂಳೆಯುಗುರ್ವುದೇನೆಲವೊ ಕೂರದೊಡಂ ಕಡುಗೂರ್ತರಂದದಿಂ
ಮೇಳಿಸಿ ಗಂಡರಿಂ ಪಡೆವುದರ್ಥಮನಲ್ಲದೊಡೆಮ್ಮ ಪೆರ್ಮೆಗಂ ।
ಪಾಳಿಗವೊಲ್ದು ಕೊಟ್ಟಪರೆ ಕೂರ್ತೊಡಮೇಂ ಬೆಲೆವೆಣ್ಗೆ ಬೇಟಮೇಂ
ತಾಳದಮಕ್ಕುಮೋ ಕಟವೆಯೋಗರಮಕ್ಕುಮೊ ತುಪ್ಪಮಕ್ಕುಮೋ ॥ ೩೬೮

(ಲೀಲಾವತಿ, ೨-೫೭.)

ಹರದಂ ಲೆಕ್ಕಿಸುವಂ ಧರಾಧಿಪತಿ ತೇಜಂದೋಱುವಂ ಸಂದ ನಾಣ್
ಬಿರುದರ್ ಕಿತ್ತಲಗೆತ್ತಿ ಸೀವರಿಸುವರ್ ವಿದ್ವಾಂಸನೋದಿಂಗೆ ಬೋ ।
ಸರಿಸಲ್ ಪೊಂದುವನೂಳಿಗಕ್ಕೆ ನಡೆವಾತಂ ಸಲ್ಗೆಯಂ ಪೇೞನೀ
ಪರಿ ತಾ ಲೋಭದ ಜಾತಿಯಿಚ್ಚೆಯಱಿದೀವಾತಂ ವಿಟಂ ಸದ್ವಿಟಂ ॥ ೩೬೯

ಎತ್ತಿದ ಬರ್ದೊರ್ ಮೇಣ್ ಒದಗೊ ಪೇೞಿಮಿದೀಕೆಯು ಕೂರ್ಪೊರ್ ಮೆಲ್ಪೊ ಚಿ
ಕ್ಕೊತ್ತಿಗೆ ಕೊಟ್ಟವಂ ಕುಡುವನಾಗಳೆ ಪಕ್ಕೆಗೆ ಪಕ್ಕೆಗರ್ಥಮಂ ।
[8]ತೆ[8]ತ್ತನೆ ನಣ್ಪಿನೊಳ್ ನಡೆವನಾ ಕಡುನಣ್ಪಿನ ಗಂಡನೋಹಿಯೊಳ್
ಪತ್ತುವ ನೋಹಿಗಿತ್ತವನೆ ಸಜ್ಜನಕಿತ್ತ[9]ವ[9]ನೆಂದು ಸುತ್ತುವಂ ॥ ೩೭೦

(ಲೀಲಾವತಿ, ೨-೭೨.)

ಬಿಯಮುಂ ಬೇಡಿತನೀವರಗ್ಗದ ಬೊಜಂಗರ್ ಕೂರ್ತು ಕಣ್ಗಾಣದೊ
ತ್ತೆಯಮೇಲೊತ್ತೆ ಬರುತ್ತಮಿರ್ಪುದುಟಿದರ್ ಪೊಕ್ಕಾವಗಂ ಕೊಟ್ಟು ಕೋ ।

---

[1] ತಿ (ಅ). [2] ರೀವಕಳ್ (ಅ). [3] ವಾರ (ಕ.ಖ). [4] ಯೆನ್ನಿರೇ (ಅ).
[5] ಹ (ಖ.ಬ). [6] ಜ್ಜೆ (ಖ.ಬ). [7] ಗೀವ (ಅ). [8] ದಿ (ಖ.ಬ). [9] ಹೆ (ಖ.ಬ).

ಟಿಯುಮಂ ಕಾದೊಡನಿರ್ಪರಿಲ್ಲ ಪಡಪಿಂದೀ ಕೇರಿಯಂ ಬಿಟ್ಟು ಸೂ
ಳೆಯರೆಲ್ಲಂ ನೆರೆಪಳ್ಳಿವೋದರಿವಳೀ ಮಾಧುರ್ಯಮಿನ್ನೆಂತುಟೋ ‖ ೩೭೧
(ಲೀಲಾವತಿ, ೨-೭೪.)

ಮನೆವಾಙ್ ಸಲ್ವುದು ಕಾಮಧೇನು ಕಱೆದಂತೊಲ್ದೀಯಲುಂ ಬಿಚ್ಚತಂ
ಮನೆವಾಟ್ ಸಲ್ವುದು ಕಾಮದೇವನಳಿಯಂಬೊಕ್ಕಂತೆ ಸನ್ಮಾನದಿಂ।
ಮನೆಯುಂ ಮಕ್ಕಳುಮೊಪ್ಪುತಿರ್ಪುದು ಬಸಂತಂ ಭಾವನಾದಂತೆ [1]ಕಾ
ಮಿನಿಯಂ ನೋಂತಳೆ ದಲ್[1] ಮಗಳ್ ಪಡೆದಳೀಸೌಭಾಗ್ಯೆಯಂ ಭಾಗ್ಯೆಯಂ‖೩೭೨
(ಅನಂತನಾಥಪುರಾಣಂ, ೮--೨೪)

ಏಱಿದ ಜವ್ವನಂ ನಸು ಬಟಲ್ದುದು ಬೇಟದ [2]ಬೇಗೆ[2]ಯಿಂದೆ ಬೆಂ
ದಾಱಿದುದ್ಯೆದೆ ಚಿತ್ತಮತಿಚಿತ್ರ[3]ರತಂ[3]ಗಳೊಳಿಚ್ಚೆಯಾಗಳುಂ।
ನೀಱರನೀಗಳಾಯ್ದುಱಸುತಿರ್ದ[4]ಪು[4]ವೀಕೆಯ ಕಣ್ಗಳೀಕೆ ಕಾ
ಯ್ದಾಱಿದ ಪಾಲವೋಲ್ ಸವಿಯನಿನ್ನುಪಭೋಗಿಸಲಾರ್ಗೆ ಮಾಡಳೋ ‖ ೩೭೩
(ಲೀಲಾವತಿ, ೨-೯೦.)

ಧನವುಳ್ಳನುಮಿಲ್ಲದನುಂ
ಮ[5]ನದಾ[5]ಣ್ಮನುಮೊತ್ತೆಯಾಣ್ಮನುಂ ನೆರೆವೆಡೆಯೊಳ್।
ತನಗೆ[6]ಸರಿ[6]ಯೆನಿಪ ಬರ್ದಿನ
ವನಿತೆ[7]ಗೆ ಸಲೆ[7]ಸಂದುದುಟಿದರೊಳ್ ಸಂದಪುದೇ‖ ೩೭೪
(ಲೀಲಾವತಿ, ೨-೮೨.)

ಪಣಗೊಳ್ವಳ್ ಚೆಲ್ಲದಿಂದಂ ಚದುರನ ಚದುರಂ ಸೇಸೆಗೊಳ್ವಳ್ ರತಂ ತೋ
ರಣಮೆಂಬಂ[8]ತಿಕ್ಕಿ ಗೆಲ್ದುಬ್ಬಸದ ಬೆ[8]ಸನಿಯಂ ಕೂರ್ತನಂ ತೊಂಡಿನಿಂ ಕುಂ।
ಟಣಿ ಮಾಟ್ಪಳ್ ಕೇಣದಿಂ ನಾಣೊಡೆಯನನೆಡೆಯೊಳ್ ನಿರ್ಧನಂ ಮಾಟ್ಪಳಿಂತೀ
ಗಣಿಕಾಸಂದೋಹದೊಳ್ ತೇಪೆಯೆ ಪುರುಷಗುಣಶ್ರೀಗಳಗ್ರಾ[9]ಹಿಯು[9]ಲ್ತೇ‖ ೩೭೫
(ಲೀಲಾವತಿ, ೨-೯೭.)

ತೀಡುವ ಗಾಳಿಯುಂ ಪಿಡಿದು ನೋಡುವ ಸಿಂಗಮುನಾಗಳಂತೆ ನಾಯ್
ಮಾಡುವ ಬನ್ನಮೇಲೆ ಬಯಲಂಗವನಾಡುವ ಬೆಟ್ಟನಣ್ಣಿಕ
ಲ್ಲಾಡುವ ಚಂದ್ರನಂ ಪಿಡಿದು ಸೂಡುವ ಬೊಮ್ಮನನಾದೊಡಂ ಮರುಳ್
ಮಾಡುವ ಕಾಳುಗುಂಟಣಿಯರಾರುಮನೇಳಿಸಿ ಕಾಡದಿರ್ಪರೇ ‖ ೩೭೬

---

[1] ಸಜ್ಜನಚಿಂತಾಮಣಿಯಂ (ಅ). [2] ಬೆಂಕಿ (ಅ). [3] ತರಂ (ಖ.ಬ). [4] ದೀ (ಖ.ಬ). [5] ನೆಯಾ (ಖ.ಬ). [6] ಮನೆ (ಖ.ಬ). [7] ಯರೊಳ್ (ಖ.ಬ). [8] ತೀಗ ಸೋಲ್ತೊರ್ಬಸದಬ (ಅ). [9] ಹ್ಯಮ (ಖ.ಬ).

ಪೆಣಕಟಲಾರ್ಪರ್ರಾರ್ ಪೆಣಕೆ ಬಾಯಣಮುಳ್ಳೊಡೆ ಪೋದ ಜೀವಮುಂ
ಪಣಮೆನೆ ಬರ್ಕುರ್ಮಂತರದಿನೊಯ್ವ ಜವಂ ಪಣಮುಳ್ಳೊಡೊಯ್ವ ಕುಂ।
ಟಣಿಯರನೊಯ್ಯಲಾಱನಣಮೆಂಬಣದಾರಕೆ ಸಂದ ಲೋಭಿಗುಂ
ಟಣಿಯರನಾವ ದೈವ ಮುಳಿಗುಂ ನೆಱೆಯಲ್ಕವರಂತು ಗಂಡರಾರ್ ॥ ೩೭೭

ಅರಿವುದು ಮೂಗನಿಕ್ಕುಡೊಳೆ ಕೀೞ್ವುದು ಪಲ್ಗಳನೇೞು ಬಟ್ಟೆಯಾ
ಗಿರೆ ಕಿಱಿದೆಂಟು ಸೂೞ್ ಬಗಟಿ ಕೊಯ್ವುದು ಮಂಡೆಯನುಟ್ಟ ಸೀರೆಯೊಂ
ದರೆವೋದೆದಿರ್ದುರ್ದಂ ಸುಲಿದು ಕೊಳ್ವುದು ಕುಂಟಣಿಯಂ ಕುಟುಂಬದೊಳ್
ನೆರಪುವುದಲ್ಲದಂದು ಮುದುದೊತ್ತಿರ ಬಾಧೆಯೊಳಾರೊ ಬರ್ದಪರ್ ॥ ೩೭೮

ಕರೆಯದೆ ಕಾಡಿ ಕಂಟಿಸುವ ಕುಂಟಣಿಯಂ ನೊಣಗಚ್ಚಿ ತಿಂಗೆ ಬಿಂ
ಗಿರಿಟಿ ಬಳಾರಿ ಬಾಧಿಸುಗೆ ಚಂಡಿಕೆ ನುಂಗುಗೆ ಮಿೞ್ತು ಕೂರ್ತುರ್ಗು।
ಕ್ಕರಿಸುಗೆ ಕಾ[1]ಳಿ ಕೊಳ್ಗೆ [1]ಱೆಯಪಂ ಮುಱಿದಿಕ್ಕುಗೆ ಮಾರಿ ಭೈರವಂ
ಹರಹುಗೆ ಮೇಳೆಯಂ ಪಿಡಿಗೆ ಮಾಳಟಿಗಾಂ ಮೊಗವಾರವೆತ್ತುವೆಂ ॥ ೩೭೯

(ಲೀಲಾವತಿ, ೨–೧೦೬.)

ಮಾರಿ ಹೊಡೆದುಣ್ಗೆ ಕನ್ನೆಕು
ಮಾರಿಗೆ ಕುಱಿಯಾಗಿ ಬೇಳ್ಗೆ ಸಿಡಿಲೆಱಗುಗೆ ರೌ।
ದ್ರೋರಗನೊರ್ಮೆಯೆ ನುಂಗುಗೆ
ಬಾರಿಸಲಾ ಬಿರುದ ನುಡಿವ ಮುದುಗುಂಟಣಿಯಂ ॥ ೩೮೦

ಭಾವಿಪ ಸೇವಿಪಾದರಿಪ ಪೇಳಿಪ ಮೇಳಿಪೊನಲ್ವ ಗೆಲ್ವ ಸೋ
ಲ್ವಾವರಿಪೇವಮುಂ ಪಡೆವ ಪೊತ್ತಿಪ ಜೊತ್ತಿಪಟಲ್ವ ನೇಲ್ವ ಮಾ
ಯಾವಿಗಳಪ್ಪ ಮುತ್ತಮುದುಗುಂಟಣಿಯರ್ಕಳ ಕೃತ್ರಿಮಂಗಳಂ
ಭಾವಕಚಕ್ರವರ್ತಿ ಕವಿಕೇಶವದೇವನೆ ಬಲ್ಲನುರ್ವಿಯೊಳ್ ॥ ೩೮೧

ಇಟಿದೇೞುವೊಟಂ ಗಂಡರೊ
ಳಟಿಪೆಂಬುದು ತನಗೆ ಮುತ್ತಮುದುಗೂಂಟಣಿ ತಾಂ।
ಕಟಿವಣ್ ಮುತ್ತದ ಪಣ್ಲೆ
ಪಟವಱಿಗೋಲ್ ಪಱಿದ ಭೇರಿ ನೀರ್ ತೆಗೆದ ಕೊಳಂ ॥ ೩೮೨

ನಗುವೊಡೆ ಪಲ್ ಕಟಲ್ದಪುವು ಡೊಳ್ಳಿನೊಳಪ್ಪುವ ಗಂಡರಟ್ದಪರ್
ಪುಗುವೊಡೆ ಪಾಸಲುಂ ಪೊದೆಯಲುಂ ಮೊಲೆ ಸಾಲ್ವುವು ನಿದ್ರೆಯಲ್ಲಿ ಮೆ।

[1] ಳಿಕೊಳ್ಳೆ (ಖ).

ಲ್ಲಗೆ ತೊಡೆಮೇಲೆ ಬೀಳೆ ಮಹನಾಮಿ ಬೊಜಂಗತನಕ್ಕೆ ನೋಡೆ ಸೂ
ಳೆಗೆ ಕೊಡವೇಟ್ಟರೀ ಪಟಬಳಾರಿಗೆ ಕೊಟ್ಟನದೊರ್ವನೊತ್ತೆಯಂ ॥ ೩೮೩

ಕಟ್ಟಿದ ಪಲ್ಗಳಿಟ್ಟೆಡೆಯು ಕೀಱ್ಗಳಿಂ ಕೊಳೆನಾರ್ವ ಬಾಯ್ ಸುರು
ಳ್ದೊಟ್ಟಿದ ರೇಖೆ ಬಿಟ್ಟು ನಿಱಿಗೊಂಡ ಕುಚಂ ಸಱಿಗೊಂಡ ಪೆರ್ಬಸಿಱ್
ಬಿಟ್ಟಪುಗೆಟ್ಟ ತೋಳ್ ತೊಡೆ ತೆರಳ್ದ ಮೊಗಂ ನರೆ ಮತ್ತೆ ಮಾಣಳೀ
ಬಟ್ಟೆಯ ಚಿಕ್ಕಣಿಕ್ಕೆ ಪೊಸ ಬರ್ಬರ ಸೂಳೆಯರಾಳಿಗೊಂಬುದಂ ॥ ೩೮೪

ಕಾವುದು ದೇವ ಯಾಚಕನನಂಜದಿರಂಜದಿರೇಕೆ ನೇಲ್ವ ತೋ
ಳ್ಭಾವಲೊ ಮತ್ತವಾರಣದ ಸೊಂಡಿಲೊ [1]ಕೋ[1]ದೆರ್ದೆವೃತ್ತಿನಿಂದೆ ಪೆ।
ರ್ಬಾವೆರಡೊಡ್ಡುಗೊಂಡು ಪೊಱಮಟ್ಟವೊ ಪೋದೊಡೆ ಪೊಯ್ವುವೆನ್ನನೋ
ವೋವತಿಭೀತಿಯಾದಪುದು ಸೂಳೆಯ ಸೋರ್ವೊಲೆಗಂಡು ಭೂಪತೀ ॥ ೩೮೫
(ಲೀಲಾವತಿ, ೨-೧೦೮.)

ಪಿಡಿ ನಡೆಯೊತ್ತೆಯೇಂ ನಿನಗೆ ನೀನೊಲಿದಿತ್ತುದೆ ತೋಱ ಸೂಳೆಯಾ
ವೆಡೆ ಸುಡು ಕಾಣ ಕಣ್ಣೊಡೆದುವೇ ಹರೆಯಂ ಪಿರಿದಬ್ಬೆ ನೀಮುಮೇಂ।
ಪಡುವಿರೆ ಮೂರ್ಖ ಮುಪ್ಪೆ [2]ಮನಕಂ ನಿಮಗಂ[2] ಪೊಸವೆಂಡಿರಿರ್ದವೋಲ್
ಕುಡುವರೆ ಕಾಯ್ಗಳಿಂದಱಿಯ ಪಣ್ಣ್ನಿದೆಂಬುದ[3]ನೆಯ್ದೆ ಲೋಕದೊಳ್[3] ॥ ೩೮೬
(ಲೀಲಾವತಿ, ೨-೧೨೫.)

ಇದು ಚಿತ್ರಂ ಮೃದುಪಾದಪಲ್ಲವದ ಮೆಲ್ಪಂ ನೋಡ್ಪೊಡೀ ಕೇಶಪಾ
ಶದ ನೀಳ್ಪಂ ಮೊಲೆಯಲ್ಲಿ ಲೋಚನದ ಬೆಳ್ಪಂ ಮಧ್ಯದಲ್ಪತ್ವಮ
ಪ್ಪುದ[4]ದಿಂ[4]ತೀ ಮುಡಿಯಲ್ಲಿ ಮಾನಿನಿ ಕರಂ ಲಾವಣ್ಯವಾರಾಶಿ ಬ
ತ್ತಿದೊಡಂ ಮೇಣ್ ತೆರೆ ಕಾಣಲಾದಪುದದೇಂ ನಿನ್ನೊಂದು ಸಾಮರ್ಥ್ಯಮೋ ॥

ಅಡರ್ದ ಕುಚದ್ವಯಂ [5]ಲಲನೆ[5] ಬಿ[6]ಟ್ಟು[6]ವಿವೇಕನೆ ಬರ್ದೆಯೆಂದಳಿಂ
ತಡಿಗಡಿಗೋಪ ನೀಂ ಸರಸಕಾಮನಿವಾಸದೊಳಿಟ್ಟ ಕೈಯನಿಂ॥
ಪಿಡಿದಿರೆ ತಮ್ಮೊಳಿಟ್ಟುಸವಿದೋಱದ ದೂಸಱ[7]ನಿಂ[7]ದಹರ್ನಿಶಂ
ಕೆಡೆದಪುವಲ್ಲಿಗಾ ಸವಿಗೆ ಪೆರ್ಮೊಲೆಯಲ್ಲದೊ[8]ಡೇಕೆ ಬಿಟ್ಟವೋ[8] ॥ ೩೮೮
(ಲೀಲಾವತಿ, ೨-೧೦೯.)

ಮೊಲೆಗಳ್ ಬಿಟ್ಟುವಿದೊಪ್ಪದೆಂದು ಮನದೊಳ್ ಕಂಡಿರ್ದಳಿಲ್ಲೆಯ್ದೆ ಮುಂ
ದಲೆ ಬೆಳ್ಪೇಱದುದೆಂದು ನೊಂದು ಮನದೊಳ್ ಬತ್ತಿರ್ದಳಿಲ್ಲಿಂತು ಮುः।

---

[1] ಕಾ (ಅ). [2] ಧನವಂನಿಮಗೀ (ಅ). [3] ನಣ್ಣಕಾಣಿರೇ (ಅ). [4] ನಿಂ (ಖ.ಬ). [5] ದಯಿತೆ (ಅ). [6] ದ್ದು (ಅ). [7] ನೊಂ (ಅ). [8] ಡಿಂತು ಬೀಟ್ಟುಗಮೆ (ಅ).

ಸ್ಪಲೆದಾರ್ಪಂದವೊಲಾಗಿ ಮತ್ತಮೆನಗಂ ತಾಂ ಮೇಳಮಂ ತೋರ್ಪ ನಾ
ಣಿಲಿಯಂ ನೋಡವೊ ವೃದ್ಧೆಗೆನ್ನದೊರೆಯರ್ ಮೊಮ್ಮಕ್ಕಳಿಲ್ಲಾಗದೇ ॥ ೩೮೯

ನಂಬಿಸಲಾನೆ ಬಲ್ಲೆನಿದಿರಂ ಧನಮಂ ಪಡೆದಾನೆ ಬಲ್ಲೆನಿ
ನ್ನೆಂಬುದೆ ಲಜ್ಜೆ [1]ಹಾಗದ ಪಸುರ್ಮಣಿಯಂ ತೊಡವಿಲ್ಲದಂತು[1] ಬಾಯ್।
ತಂಬುಲಮೆಂಬುದಂ ಪಡೆಯದಂತುಟೆ ಮಾಱುಡೆಗಾಣದಂ[2]ತುಮ[2]
ಟ್ಟುಂಬರಿಗೊಂಡು ತೇದಪುದು [3]ಬೇಟಮೊ ಪೇಟಿದು ದೈವಕಾಟಮೋ[3]॥ ೩೯೦
(ಲೀಲಾವತಿ, ೨–೧೧೭)

ಸತ್ತೊಡೆ ಪೋಕುಮಲ್ಲದೆಡೆಯೊಳ್ [4]ಕಡಿವೋಕುಮೆ[4] ಬೇಂಟ[5]ವಕ್ಕ[5] ಬೇ
ಸತ್ತೊಡೆ ಮತ್ತೆ ಲಜ್ಜೆ ಗಡ ಮತ್ತೆ ಚಲಂ ಗಡ ಮತ್ತೆ ನಾಣ್ಗಡಂ।
ಮತ್ತೆ ಬೊಜಂಗಗೊಟ್ಟಿ ಗಡ ಮತ್ತೆ ಸೊಗಂ ಗಡ ಮತ್ತೆ [6]ತಾ[6]ಯ್ಗಡಂ
ಮತ್ತೆ ಬರ್ದುಂಕುವಾಸೆ ಗಡ ಪೇಟಿದು ಬೇಟಮೊ ದೈವಕಾಟಮೋ ॥ ೩೯೧
(ಲೀಲಾವತಿ, ೨–೧೧೮.)

ಮನೆ ಹೊಱಗಿಕ್ಕಿ ಕೇರಿ ನಗೆ ನಕ್ಕರೆ ನಾಣಿಲಿಯೆಂದು ದೂಱ ನಾ
ಣನೆ ತೊಱೆದಾರುಮಂ ತೊಱೆದು ನಂಟರ ನಲ್ಲರ ಮಾತುಗೇಳದೋ।
ಪನೆ ಪರಮಾತ್ಮನೋಪನೆ ಮನೋಭವನೋಪನೆ ದೈವಮೆಂದು ಬೆ
ನ್ನನೆ ಬರೆ ತನ್ನನೊಲ್ಲನಿದ ನೋಪ್ಪೊಡೆ ಬೇಟಮೋ ದೈವಕಾಟಮೋ ॥ ೩೯೨

ಕಡು ಮುಳಿದಿರ್ದ ನಲ್ಲನಿದಿರಂ ಬರೆ ನಲ್ಲಳ ಬಾಯ ತಂಬುಲಂ
ಪುಡಿಯಿಡವೇಟ್ಕು ಮೈ ಬೆಮರವೇಟ್ಕು ಮೊಗಂ ಕಿಱಿದಾಗವೇಟ್ಕುಮೊ
ಳ್ನುಡಿ ತೊದಳಾಗವೇಟ್ಕು ನಡನೋಡುವ ದಿಟ್ಟಿ ಕಲಂಕವೇಟ್ಕು ನಾ
ಣಿಡೆ ತಲೆದೋಱವೇಟ್ಕುಮಿನಿತಿಲ್ಲದೊಡೊಲ್ಮೆಯನಿಕ್ಕು ಕಿಚ್ಚಿನೊಳ್ ॥ ೩೯೩

ಕಟಿವದನಾದ ಮಚ್ಚು ಗಱಗಟ್ಟಿದ ಮೆಲ್ಪೊಳಗಾಱಿದಾಸೆ ಮೈ
ಯುಟಿಪದ ಸೋಂಕು ಸಂದುದೆಱದಪ್ಪುಗೆ ಬಾಯ್ ಸವಿಗೆಟ್ಟ ಚುಂಬನಂ
ಪಟಿಸಿದ ಮಚ್ಚುಮಗ್ಗಲಿಪ ನಾಣ್ನುಡಿಯುಂ ಸತಿಗಾಗೆ ಬೇಟದಿಂ
ಪಟಿದಟಿನಣ್ಪಿನೊಳ್ ತೊಡರ್ದು ನೇಲ್ಪವನೆಗ್ಗಿನ ಸುಗ್ಗಿಯಲ್ಲನೇ ॥ ೩೯೪

ಏಗೆಯ್ವೆನೆಂಬ ಚುಂಬನ
ವಾಗುಳಿಸುತ್ತಪ್ಪುವಪ್ಪು ಪದನಿಲ್ಲದ ಸಂ ।

---

[1] ಪಚ್ಚೆಯ ಪಸುರ್ಮಣಿಯಂ ಕುಡಲಿಲ್ಲದಂತು (ಅ). [2] ತಿರ (ಅ). [3] ಬೇಟವಿದೆನ್ನಯ ಪಾಪಮಲ್ಲದೆ (ಅ). [4] ಬಿಡೆಪೋಕುಮೆ (ಖ.ಬ). [5] ಕ್ಕೆ (ಖ.ಬ). [6] ಮೆ (ಖ.ಬ).

ಯೋಗಂ ಸಾಲದೆ ವಿಟನಂ
ಪೋಗೆಂದುಂ ಪುಯ್ಯಲಿಡುವಳೇ ನೂಂಕುವಳೇ ॥ ೩೯೫

ಮನಮದು ಮನದನ್ನನ ಬೆ
ನ್ನನೆ ಪೋಗಿರೆ ತನ್ನ ಬಸನದಿಂ[1]ದವಳೊಳ್ಪಂ[1] ।
ಮನಮಂ ಬಿಡೆ ಬಳೆಯಿಪ ಬೆ
ಳ್ಪನವಿದು ಪಾಟ್ಮನೆಗೆ ಬಾಯಿನಂಗುಡುವಂದಂ ॥ ೩೯೬
(ಚಂದ್ರಪ್ರಭ ಪುರಾಣಂ, ೮–೫೯.)

ಆದ್ರ್ರವನಿತಂಬಮನಿಶಂ
ನಿದ್ರಾಂಕಿತ ಮುಕುಳನಯನವನ್ಯತಾಲಾಪಂ ।
ಮುದ್ರಿತವದನಂ ವಿಟಜನ
ಹೃದ್ರೋಗಂ ಕಪಟಕಾಮಿನೀಸಂಯೋಗಂ ॥ ೩೯೭

ಅಮೃತದ ಕಂಡಸಕ್ಕರೆಯಕೂಟ[2]ಮುಮೊಲ್ವಳ[2]ಕೂಟಮುಂ ಸಮಾ
ನಮೆ ವಲಮೊಲ್ಲ[3]ದಳ್ಗೆ ವಿಟನೇ[3]ಟವಿಟಂ ಬರೆ ಕೂಟಮಿಂಪನೀ ।
ಗುಮೆ ಬೆಲೆ[4]ಗೊಂಡೆ[4]ನಾಂ [5]ಬೆಲೆಗೆ ಮೆಯ್ವೆಲೆ ಮೆಯ್ ನಲಿದಿತ್ತೆ[5]ನೆಂಬ ಕೂ
ಟಮನದನೊಂದು ಕೂಟಮೆನಲಕ್ಕುಮೆ ನಂಜಿನ ಕಾಳಕೂಟಮಂ ॥ ೩೯೮
(ಕಾವ್ಯಾವಲೋಕನಂ, ೧೪೪.)

ಬೆಲೆ ತಲೆಯುದ್ಧಮಿಲ್ಲವಸರಂ ಮನೆವೊಕ್ಕೊಡೆ ಸೂಳೆಬಂಟರ
ಗ್ಗಲಸಿದ ಮಾತೆ ಪಕ್ಕೆದಲೆಯೊಳ್ ವಿಷಮುಂ ರತಿ ವಾರನಾರಿಯೊಳ್
ಬೆಲೆ ಖರ ತುಚ್ಛವುಂಟವಸರಂ ಮನೆವೊಕ್ಕೊಡೆ ಪೊಕ್ಕನಿಚ್ಛೆಯ
ಗ್ಗಲಸಿದ ಮಾತೆ ಪಕ್ಕೆದಲೆಯೊಳ್ ವಿನುತಂ ರತಿಯಿಲ್ಲ ಮಿಂಡಿಯೊಳ್ ॥ ೩೯೯

ಕಾಲ ಪಳಂಚಿನುಂಗುರದ ಮುತ್ತಿನ ಹಾರದ ಚೆನ್ನನಪ್ಪ ಹೊ
ನ್ನೋಲೆಯ ವಜ್ರದುಂಗುರದ ಕಂಕಣದೊಳ್ಪನೆ ತೋಱು ಪೋಪರಾ ।
ಬಾಲೆಯರೇವರೊಲ್ದೊಲಿಸಿ ಪತ್ತಿಸಿ ಚಿತ್ತಮನಿಂಬುಗೆಯ್ವ ಕೀ
ಸೋಲೆಯ ಕಾಚಿನುಂಗುರದ ಚುಂಚಿಯ ಬಂದಿಯರೆಮ್ಮ ನಲ್ಲೆಯರ್ ॥ ೪೦೦

ಹಸನಹ ರೂಪು ತಕ್ಕ ಹರೆಯಂ ಕಡು ಚೊಕ್ಕಳೆ ಜಾಣೆ ಹಕ್ಕಿವೊಲ್
ಕೊಸರುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ ಗಂಡರಿಚ್ಛೆಯಂ

---

[1] ದೊರ್ವಳ್ಪಂ (ಬ). [2] ಮದೊಲ್ದಳ (ಖ.ಬ). [3] ದಂಗನೆಗೆನೇ (ಖ).
[4] ಯಿತ್ತೆ (ಖ.ಬ). [5] ನಿನಗೆ ಮೆಯ್ವೆಲೆಯುಂ ಮಿಗಿಲೇವೆ (ಖ.ಬ).

ಪೊಸಯಿಪ ಬೇಟಮಂ ಬೆಳಸುವಿಚ್ಚೆಯ ಜತ್ತಕಿ ತಾನೆ ಲೋಕದೊಳ್
ಬಸನದ ಬಿತ್ತೆ ನಿಪ್ಪಳೊಡಗೂಡಿದೊಡಲ್ಲದಲಂಪು ಪೋಪುದೇ ॥ ೪೦೧

ತೆಱನಱಿದೀವ ಕಾರ‍್ಯವಱಿದಂಜುವ ನೋಂತಱಿದಿಂಬುಗೆಯ್ವ ಮಾ
ತಱಿದುಚಿತೋಕ್ತಿಯಂ ನುಡಿವ ಮುಂದಱಿವಲ್ಲಿಗೆ ಕೊಟ್ಟು ನೋಟ್ಪ ಕ।
ಣ್ಣಱಿದೆರ್ದೆಗೊಳ್ವ ಚಿತ್ತವಱಿದಾಲಿಪವೂರ್ಜಿತಬುದ್ಧಿಯಲ್ಲದಿಂ
ಬಱಿಯದ ಗಾವಿಲಂಗೆ ದೊರೆಕೊಳ್ವರೆ ಸೂಳೆಯರೆಂಬ ಡಾಳೆಯರ್ ॥ ೪೦೨

ಒದವಿದ ಕೂರ್ಮೆಯಿಲ್ಲದಳಿಪಾರಯಮಿಲ್ಲದ ಪಾಳಿ ರಾಗಮಿ
ಲ್ಲದ ಸುಸಿಲಟ್ಕಱಿಲ್ಲದ ಸೊಗಂ ನೆವಮಿಲ್ಲದ ಕಾಯ್ಪು ಬೇಂಟಮಿ।
ಲ್ಲದ ಪುರುಡೇವಮಿಲ್ಲದಟಲುಬ್ಬೆಗಮಿಲ್ಲದ ಕಣ್ಣನೀರ್ ಕರಂ
ಚದುರರುಮಂ ಮನಂಗೊಳಿಪುದೇಂ ಕಡುಜಾಣೆಯರೋ ಲತಾಂಗಿಯರ್ ॥೪೦೩

(ಆದಿಪುರಾಣಂ, ೧೨-೪೬.)

ಅರೆಬಿರಿದಚ್ಚಮಲ್ಲಿಗೆಯ ಜೊಲ್ಲೆಹಮಿಕ್ಕಿದ ಮಿಂಚಿನೋಲೆ ಕಂ
ಡರಣೆಯ ಬೊಟ್ಟು ಕಪ್ಪುರದ ಮೂಗುತಿ ಮುತ್ತಿನ ಗಾಜುಗೊಪ್ಪು ಪಾ।
ಲ್ನೊರೆಯವೊಲಪ್ಪ ಪಟ್ಟಣಿಗೆ ಚಂದನದಣ್ಪು ಬೆಡಂಗುವೀಱಿ ನೋ
ಟ್ಪರ ಬಗೆ ಬೆಳ್ಳನಪ್ಪಿನೆಗವೊತ್ತೆಗೆ ನಿಂದಳದೊರ್ವಳೊಪ್ಪಿದಳ್ ॥ ೪೦೪

ತನುಲತೆ ಶೋಭೆಯಂ ತಳೆದು ನಿಲ್ವಿನೆಗಂ ಮುಖಲಕ್ಷ್ಮಿ ಪೂರ್ಣಚಂ
ದ್ರನನಿಳಿಕೆಯ್ದು ನಿಲ್ವಿನೆಗಮಾಭರಣ ಪ್ರಭೆಗಳ್ ಪೊದಟ್ಟು ನಿ।
ಲ್ವಿನೆಗಮಪಾಂಗಮಾಲಿಕೆ ವಿಜೃಂಭಿಸಿ ನಿಲ್ವಿನೆಗಂ ಮನೋಭವಂ
ನನೆಗಣೆದೊಟ್ಟು ನಿಲ್ವಿನೆಗವೊತ್ತೆಗೆ ನಿಂದಳದೊರ್ವಳೊಪ್ಪಿದಳ್ ॥ ೪೦೫

ಕತ್ತುರಿಯದ್ದಬೊಟ್ಟೆಸೆಯೆ ಮುತ್ತಿನ ಮೂಕುತಿಯೊಪ್ಪೆ ಚುಂಚುಗಳ್
ಕತ್ತುರಿವೀಲಿಯಂ ನಯದಿ ಜೋಲ್ದಿರೆ ಜೊಲ್ಲೆಹವೊರ್ಮೆ ನೀಱರಂ।
ಸುತ್ತುತುವೊರ್ಮೆ ಕನ್ನಡಿಯನೀಕ್ಷಿಸುತುಂ ಕಡೆಗಣ್ಣೊಳಾಗಳಂ
ದೊತ್ತೆಗೆ ನಿಂದ ವೃತ್ತಕುಚೆಯಂ ನಡೆ ನೋಡಿದನಾ ಕುಮಾರಕಂ ॥ ೪೦೬

ವಿಲಸಿತ ಚಂದ್ರಮಂಡಲವುನೊಪ್ಪಿರೆ ರೋಹಿಣಿಯಪ್ಪಿದಂತೆ ನಿ
ರ್ಮಲ ಮುಖಚಂದ್ರನೊಳ್ ಮುಱುಗಿ ಮುತ್ತಿನ ಮೂಕುತಿ ಲೋಲಲೋಚನೋ।
ತ್ಪಲರುಚಿವಿಭ್ರಮಂ ಭ್ರಮರಸಂಕುಲಮಂ ತೆಗೆಯುತ್ತಮೊಪ್ಪೆ ಕೋ
ಮಲೆ ಮದನಾಗ್ನಿ ಮೂರ್ತಿವಡೆದಿರ್ದವೊಲೊತ್ತೆಗೆ ನಿಂದಳೊಪ್ಪಿದಳ್ ॥ ೪೦೭

ತೊಳಗುವ ಪಾಟಲಾಧರದ ಚಂದನಗಂಧದ ಕೇತಕೀಲಸ
ದ್ದಳನಖದಬ್ಜವಕ್ತ್ರದ ರಥಾಂಗಕುಚಂಗಳ ಭೃಂಗಕುಂತಳಾ ।
ವಳಿಯಲರ್ಗಣ್ಣ ಪಲ್ಲವಕರಂಗಳ ಸಂಗತಿವೆತ್ತ ಚೆಲ್ವು ಕಂ
ಗೊಳಿಸೆ ಮನೋಜನಿರ್ಪ ವನಿತಾ[1][ವ][1]ನಮೆಂಬಿನಮೊರ್ವಳೊಪ್ಪಿದಳ್॥ ೪೦೮

ಮಿಸುನಿಯ ಕಂಕಣಂ ಪೊಳೆವ ಪೊಂಬಳೆಯೊಪ್ಪುವ ನಾಗಚಂಪಕ
ಪ್ರಸರದ ಚೊಲ್ಲೆಹಂ ಹಳದಿಯಂಬರವೊಪ್ಪುವ ದೋರೆವಲ್ ಕರಂ।
ಮಿಸುಗುವ ಪುಷ್ಯರಾಗಮಣಿಮುದ್ರಿಕೆಯಿಂದಮಲಂಪುಗೊಂಡು ನಿಂ
ದಸಿಯಳು ಪೋಲ್ತಳಂಗಜನ ವಲ್ಲಭೆಯರ್ಚಿಪ ಪೊನ್ನಬೊಂಬೆಯಂ ॥ ೪೦೯

ಮುತ್ತಿನ ಸೂಸಕಂ ಮುಡಿದ ಮಲ್ಲಿಗೆಯಿಕ್ಕಿದ ಮಿಂಚಿನೋಲೆ ಮೆ
ಯ್ವತ್ತಿದ ಚಂದನಂ ಸುಲಿದ ಪಲ್ ಕಡೆಗಂಗಳ ಕಾಂತಿ ಕಾಲುಗು।
ರ್ಗತ್ತಿದ ಮಿಂಚುವುಟ್ಟ ದುಗುಲಂ ಘನಸಾರದ ಹಾರವೊಪ್ಪೆ ಬಂ
ದೊತ್ತಗೆ ನಿಂದ ವೃತ್ತಕುಚೆ ಮುತ್ತಿನ ಪುತ್ತಳಿಯಂತಿರೊಪ್ಪಿದಳ್ ॥ ೪೧೦

ಕುಡಿವುರ್ವಂ ನಸು ನೀವುತುಂ ತಿಲಕಮಂ ತಿದ್ದುತ್ತುಮಾಸ್ಯಾಬ್ಜಮಂ
ತೊಡೆವುತ್ತುಂ ಕುಟಿಲಾಳಕಾವಳಿಗಳಿಂ ಸ್ವೈತೊತ್ತಿ ಚೆಲ್ವಾಗೆ ನೇ
ರ್ಪಡಿಸುತ್ತುಂ ಮದಿರಾಲಸೇಕ್ಷಣೆ ಮದಸ್ತಂಬೇರಮಾಕಾರದಿಂ।
ನಡಪಾಡುತ್ತುಮುಪಾಂಗಣಪ್ರಘಣದೊಳ್ ತನ್ವಂಗಿ ಕಣ್ಗೊಪ್ಪಿದಳ್ ॥ ೪೧೧
(ಶೃಂಗಾರರತ್ನಾಕರಂ, ೨-೫೯.)

ನಗೆಗಣ್ ಸೂಸೆ ವಿಲಾಸಮಂ ನಗೆಮೊಗಂ ಲಾವಣ್ಯಮಂ ಬೀಱೆ ಸಾ
ವಗಿಸುತ್ತುಂ ಕಚಬಂಧಮಂ ಶಿಥಿಲನೀವೀಬಂಧಮಂ ಕಾಂಚಿಯೊಳ್।
[2]ನೆಗಪುತ್ತುಂ ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ
ಬಗೆಯಂ ಬಲ್ಸೆಱೆಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ[2] ॥ ೪೧೨
(ಮಲ್ಲಿನಾಥಪುರಾಣಂ, ೮-೬೮.)

ಕರಿಕುಂಭೋರೋಜೆ ಕಂಜಾನನೆ ಮಧುಕರಮಾಲಾಂಶು ಧಮ್ಮಿಲ್ಲೆ ಹಂ[3]ಸೀ[3]
ವರಲೀಲಾಯಾನೆ ಪೇಟೊತ್ತಿಯ ಬೆಲೆಯನೆನಲ್ ಸಿಂಹವಿಕ್ರಾಂತ ರಾತ್ರೀ।

---

[1] ಜ (ಖ.ಬ). [2] ತೆಗೆಯುತ್ತುಂ ಪ್ರಣಯಾನುಬಂಧಮಖಿಲೋರ್ವೀಶಂಗೆ ಶೃಂಗಾರಚೇ।
ಷ್ಟೆಗಳಿಂ ಕಣ್ಗೆಸೆದಿರ್ದುದೆರ್ದು ಕೆಲದೊಳ್ ನಿಂದಿರ್ದ ಕಾಂತಾಜನಂ ॥ (ಅ)
ಅಚ್ಚಿನ ಪ್ರತಿಯಲ್ಲಿಯೂ ಲೈಬ್ರರಿಯಲ್ಲಿರುವ ಮಲ್ಲಿನಾಥಪುರಾಣದ ಮತ್ತೆರಡು ಕೈಬರಹದ ಪ್ರತಿಗಳಲ್ಲಿಯೂ ಈ ಪದ್ಯದ ಉತ್ತರಾರ್ಧವು ಇಲ್ಲಿ ಪುಟದಡಿಯಲ್ಲಿ ಪಾಠಾಂತರವಾಗಿ ಕೊಟ್ಟಿರುವಂತೆ ಇದೆ. ಸೂಕ್ತಿಸುಧಾರ್ಣವದ ಎರಡು ಪ್ರತಿಗಳಲ್ಲಿಯೂ ಮೇಲೆ ಮೂಲಪಾಠವಾಗಿ ಕೊಟ್ಟಿರುವಂತೆಯೇ ಇದೆ. ಇಲ್ಲಿ ಎರಡು ಪದ್ಯಗಳ ಪೂರ್ವಾರ್ಧ ಉತ್ತರಾರ್ಧಗಳು ಸೇರಿ ಹೀಗಾಗಿರಬಹುದೇ? [3] ಸೆ (ಖ), ಸಾ (ಬ).

ಶ್ವರರೋಚಿರ್ಧಾಮ ಕೀರ್ತಿಪ್ರಿಯತಮ ವಿಕಸಚ್ಚಂಪಕಾಮೋದ ಧಾರಾ
ಧರನಾದಾಯೇಂ ಬೆಸಂ ಕುಳ್ಳಿರಿಮೆನೆ ಚದುರಂ ಪೋದನಾಂದೋಳಶೀರ್ಷಂ ॥

ಕೈರವನೇತ್ರೆ ಚಕ್ರಮಿಥುನಸ್ತನೆ ಕೀರವಚಃಪ್ರಯುಕ್ತಿಯಿಂ
ಭೋರುಹಲಾಸ್ಯೆ ಪೇಟ್ ನಿನಗೆಯೊತ್ತಿಯದೇನೆನೆ ಲೋಕಮಿತ್ರ ತಾ ।
ರಾರಮಣಪ್ರಕಾಶ ಖಗವೈರಿವಿಹಂಗಮಸಾಳ್ವ ಅಷ್ಟದಿ
ಗ್ವಾರಣಸತ್ವ ಕುಳ್ಳಿರೆನೆ ತಾಂ ತಲೆದೂಗಿಯೆ ಪೋದನಾ ವಿಟಂ ॥ ೪೧೪

ವನಜಾತಾನನೆ ಪೇಟ್ ಸುಧಾಂಶುಯಶ ಕೇಳ್ ಹಂಸಾಂಗನಾಯಾನೆ ಪೇಟ್
ಘನನಾದಾನ್ವಿತ ಕೇಳ್ ಮದದ್ವಿರದಕುಂಭೋರೋಜೆ ಪೇಟ್ ಸಿಂಹಶೌ ।
ರ್ಯನೆ ಕೇಳ್ ಮತ್ತಮದಾಳಿಕಾಕಬರಿ ಪೇಟ್ ಚಂಪಕಾಮೋದ ಕೇ
ಳೆನಲಾ ಕಾಂತೆಯನಂತೆ ಬಿಟ್ಟನದನಿನ್ನೇನೆಂಬೆನಾಶ್ಚರ್ಯಮಂ ॥ ೪೧೫
(ಪುಷ್ಪದಂತ ಪುರಾಣಂ, ೮-೧೧೧).

ಸಂಗೀತೋತ್ಸವ ಜೀವಿತೇಶ ವರವಿದ್ಯಾವಾಸ ಕಾಂತಾಜನಾ
ನಂಗಾಧ್ಯಕ್ಷ [1]ಲ[1]ಸದ್ವಿಲಾಸಗುಣಜಾಲೋಪೇತ ಸತ್ವಾಧಿಕಾ ।
ಶೃಂಗಾರಾನ್ವಿತ ಲೋಕರಕ್ಷಕ ಎನುತ್ತೋರ್ವಳ್ ಮಹಾಪ್ರೌಢೆಯು
ತ್ತುಂಗೋರೋಜೆ ಮರಾಳಯಾನೆ ವಿಟನಂ ಕೊಂಡಾಡೆ ನಕ್ಕಂ ನೃಪಂ॥ ೪೧೬

ತರುವಲಿ ಬೇಡ ಪಿಂಬರೆಯುದಂ[2]ಗ[2]ನೆಯಾದೊಡೆ ಬೇಡ ಜವ್ವನಂ
ಗರಗರನಪ್ಪ ಸೊಂಪುತನವುಳ್ಳವ[3]ಳಾ[3]ದೊಡೆ ಬಂದು ಮುಂದೆ ಸಂ ।
ಚರಿಸುಗೆ ನೋಡಿ ಗಾಡಿ ಬಗೆಗೆಟ್ಟುದುದೆ ಬಟಿಕೊತ್ತೆಗೊಂಡಪೆಂ
ಪರಮುಖಮಲ್ತು ಮೆಚ್ಚು ಮುಸುಕೊತ್ತೆ[4]ಯೆ[4]ನಿಪ್ಪುದನಿಕ್ಕು ಕಿಚ್ಚಿನೊಳ್ ॥ ೪೧೭

ನರೆಯ ಬೊಜಂಗನುಮಾನುಂ
ನೆರೆದಿರ್ದೊಡೆ ನೆರೆದು ಬಿನದದಿಂ ನೋಟ್ಟಿವರಿ ।
ನ್ನರಗಿಳಿಯುಂ ಬೆಳ್ಪೊಱಸುಂ
ನೆರೆದಂದಮನಱಿಸಿಕೊಳ್ವರೆಮ್ಮೊಳವೋಘಂ ॥ ೪೧೮

ಒತ್ತಿಗೆ ನಿಲ್ವುದೆಂದುಟಿಯುವೇಟ್ಟಿಪಳೋಪಳನೆನ್ನನಿಂತೆ ತಾಯ್
ಮುತ್ತಳೆ ಪುಟ್ಟುವಂದು ಬೆರಳೊಂಬತು ತನ್ನಯ ತೋಳೊಳಾದುವೇಂ।
ಕುತ್ತದೊಳಾದ ಚುಚ್ಚುಗಲೆಯೇ ಎದೆಗಗ್ಗಳ ಕಪ್ಪು ಕಾಡಿ ಮೇಣ್
ಕುತ್ತಿಸಿಕೊಂಡುವೇ ನುಡಿವ ಕುಂಟಣಿಯಂ ಜವನೊಯ್ಯದಾದನೇ ॥ ೪೧೯

---

[1] ರ (ಕ.ಖ.ಗ.ಬ) [2] ನ (ಖ. ಬ). [3] ನಾ (ಖ. ಬ). [4] ಯ (ಖ. ಬ).

ನಿಮತಿನಿತೇಕೆ ಹೊಂದವಕಮಿತ್ತನಿನ[1]ಗ್ಗ[1]ಳವೀವರಾರಿಗೇ
ಕಮರ್ದನೆ ನಂಜು ಮಾಟ್ಪುರುಳಿಯೆಂಬುದೆ ಕೊಟ್ಟನೆ ಕಾಣಲಕ್ಕು ಮಾ ‖
ನವೆ ಮಱೆಯಾಗೆ ನೋವಿನೊಳಗಂದುಟಿಯೆಂ ಬಳಿಕೇವಿರೊಳೊಕ್ಕ ತು
ಪ್ಪಮ[2]ನುಡು[2]ಗಲ್ಕೆ ಬಂದಪುದೆ ನೀವಱಿಯಲ್ ಚಲವೊಳ್ಳಿಕೆಯ್ಯುವೆಂ ‖? ೪೨೧

ಇವಳಂ ಪೆತ್ತನೆ ಕುತ್ತುವೆತ್ತನಿವಳಿಂದಂ ಲಜ್ಜೆಗೆಟ್ಟೆನ್ನರಾ
[3]ರಿ[3]ವಳಂ ನುಂಗದು ದೈವಮೆನ್ನ ತಲೆಯಂ ಮೇಣ್ ಕೊಳ್ಳದೇನೆಂದು ಸಾ ।
ಱುವುದಂ ಸಾಧನ ಮೋನಮೆಂದು ನಿಲೆ ಕೂರ್ತಾ ಕೂರ್ತೆ ನೀನಿನ್ನು ಮಾ
ಡುವುದಂ ಮಾಡೆನೆ ಮುದ್ರಿಸಿತ್ತು ಮಗಳಿಂದಂ ತಾಯ ವಕ್ತ್ರಂ ಕರಂ ‖ ? ೪೨೧

ಹರೆಯದಿನಗ್ಗಳಂ ಹಣದ ಮೇಗಣ ಮೋಹಮಿವಳ್ಗೆ ಬಪ್ಪಿನಂ
ತುರಿಪಮೆಯರ್ಥಮಂ ಕ್ರಮದಿನಾ ಮುದುಪಂ ಗಡ ಕೊಟ್ಟನೊತ್ತೆಯಂ ।
ಗರಗರನಾಯ್ತು ಬಲ್ಮೆ ಮುದುಗೂಗೆಯ ಬಾರಿಗೆ ಕೈ[4]ನೆ[4] ತಾನೆ ಮೈ
ಗರೆದೆನಗೊತ್ತೆಗೊಟ್ಟ ಸುಖ ಮಾಡ್ಕೆವೆಪಟ್ಟದನಕ್ಕ ಬಟ್ಟಿಪೆಂ ‖? ೪೨೨

ತಲೆ ಹುಟಿತ ನಾಯ ಸುಡು ಗಾ
ವಿಲ ಬಟ್ಟೆಯ ಚಿಕ್ಕಣಿಕ್ಕೆ ಬೆಳ್ಗತ್ತೆಯ ನಾ ।
ಣಿಲಿ ನೆಲ್ಲಹೆಡಿಗೆ ಸಡಿಘಡ
ಚೆಲುವರಿಯದ ಕುಡದ ಕಾಮದೇವನ ದೇವಂ ‖? ೪೨೩

ಮುಡುಹಿನ ಮು[5]ಕ್ಕಿ[5] ಸೊಕ್ಕದಿರದೇನಭಿಮಾನದ [6]ಬೊಡ್ಡಿ[6] ಬಾಲಮಂ
ಬಡಿದಪೆ[7]ಯೆ[7]ತ್ತ [8]ಚೀಃ[8] ಬಿಸುಡು[9]ಗೊಯ್ಕೆ[9]ಯರುಟ್ಟುದಱೊದ್ದೆ [10]ಬೀಟ[10]ಬೆರಳ್ ।
[11]ಗಡಿಕೆ[11]ಯರಂಟಸುಂಟಿ ಸುಡು ಪಂ[12]ಜೆ[12]ಗಳೆಂಜಲ ಹಂ[13]ಜೆ[13]ಯೆಂದು ಬ
ಯ್ದೊಡನೊಡನೆತ್ತಿದರ್ ಮಸಗಿ ಬೇಂಟದ ಬನ್ನಮನಕ್ಕತಂಗಿಯರ್ ‖? ೪೨೪
(ಅನಂತನಾಥಪುರಾಣಂ, ೮–೩೧).

ಇದು ತಲೆಗೊಯ್ಸಿದತ್ತು ಮುಡಿಯಲ್ ನೆಱೆ ಕಲ್ಲದು ಬೇಕುಬೇಕಿದೆಂ
ದದೆ ತನುವೆಲ್ಲಮಂ ಕಿಡಿಸಿಕೊಂಡು ಮುಡಲ್ ನೆಱೆ ಕಲ್ಲದಾಯ್ತು ಬೇಂ ।
ಟದೊಳಿದು ಬೆಳ್ಪಿಲಂ ಕಿಱಿಯರಾರೊಳಲ್ಲದು ನೋಡ ಬಂದ ಕಾ
ಲದ ಪರಿಯಂ ಮುಗುಳ್ ಮೊಲೆಯ ಮೂಲಮುಮಾಡುವುದಕ್ಕೆ ಗೋಷ್ಠಮಂ‖?

ಇದು ನೆಲಮುಕ್ಕು ತಾ ಪಸಿದೊಡಲ್ತುಣವೇಳ್ಪುದು ತಾಯೊ ನೋಪ್ಪೊಡಿಂ
ತಿದಱ ಗೃಹಕ್ಕೆ ಬಪ್ಪ ಮುಸುಕಂ ಬರವಿದ್ವವಿದಾವ ಲಗ್ನದೊ ।

---

[1] ಗ (ಗ). [2] ನುಂ (ಖ). [3] ತಿ (ಖ.ಬ.ಗ). [4] ಗೆ (ಬ). [5] ಕ್ಕೆ (ಅ).
[6] ಜೋಡೆ (ಅ). [7] ಯಿ (ಅ). [8] ಚುಂ (ಅ). [9] ಗೋರಿ (ಅ). [10] ಪೆಬ್ಬೆ (ಅ).
[11] ಕಡಿಯದ (ಅ). [12] ಚಿ (ಅ). [13] ಚೆ (ಅ).

....ಳುದ....ಕಲ್ತು ತನಗೆ ಪತ್ತಿಪ ಜೊತ್ತಿಪ ಕೇಣವೆಮ್ಮ ಕಾ
ಲದೊಳಿನಿತೊಂದ ನಾವಱಿಯೆವಿಂದಿನ ಕೋರಿಗಳಂದವದ್ಭುತಂ ॥? ೪೨೬

ಮಾರ್ಮುಗಿಲಾಡಿದಪ್ಪುದು ಬೊಜಂಗರ ಸಂದಣಿ ಪ[1]ಟ್ಟಪ[1]ಟ್ಟಿಕಾ
ಕರ್ಮದ ರತ್ನಭೂಷಣದ ಕಾಂತಿ ತಳಿರ್ತಪುದಿಂತು ಮೂಲನೀ ।
ಪೆರ್ಮೆಗೆ ನೋಂ[2]ತುದೀ ಪ[2]ರೆಯುವೀ ಪದಪೀ ಸೊಬಗೀ ವಿಲಾಸಮೇಂ
ಕಾರ್ಮಟೆಯೊಳ್ ಬಸಂತನಿವಳಂಗಣದೊಳ್ ನೆಲಗೊಂಡುದಕ್ಕುಮೇಂ ॥ ೪೨೭
(ಅನಂತನಾಥಪುರಾಣಂ, ೮-೧೯.)

ಪರಿಣತೆಗಿನ್ನುಮಿಲ್ಲ ಬಳೆ ತಾನಿದು ಮ್ಯೆನೆರೆದೊಂದು ಸುಗ್ಗಿ ಬಿ
ತ್ತರಿಸುಗುವಣ್ಣ ನಿಮ್ಮ ದೆಸೆಯಿಂ ಕಳೆಯೊಳ್ ಶ್ರಮಮುಂಟು ಮುನ್ನ ಬ ।
ಲ್ಲರ ಹುಸಿಶಿಕ್ಷೆಯಿಂದೆ ಮಱಮುಚ್ಚಿಸಲಾರ್ಪುವೆ ನಿಮ್ಮನನ್ನೆಗಂ
ಸರಸರಗೊಟ್ಟಿಗಟ್ಟಿ ಪಿರಿದಾದುದು ನೋಡಿರೆ ತನ್ನ ಪುಣ್ಯಮಂ ॥ ೪೨೮

ಮನಮಂ ಮೋಹಿಸು ನೋಟದೊಳ್ ನುಡಿಯೊಳಿಂಪಂ ಬೀಱು ಮೆಯ್ಯ್ಮೋಳ
ದೊಳ್
ತನುವಂ ಮೆಚ್ಚಿಸು ಕೂಟದೊಳ್ ಪದೆದ ಮೆಯ್ಯಾಗೊಲ್ದವೊಲ್ ಸುತ್ತು ಸು ।
ಸ್ವನನಿತ್ತಳ್ಕುವ ಲೋಭನಂ ಪುಗದಿರಾರ್ಗಂ ಕೂಡದಿರ್ ನಾಣ ಪೆಂ
ಪನೆ ಕಾಯೆಂದೆಳಸೂಳೆಗೋದಿಸುತಲಿರ್ದಳ್ ಸೂಳೆಸಿದ್ಧಾಂತಮಂ ॥ ೪೨೯

ಅಲಸದೆ ಬಿಚ್ಚತಂ ಬೆಸನಿಯೆಂದುದಗೆಯ್ವುದು ಕೂರ್ತ ಭಂಗಿಯಿಂ
ದೊಲಿಸುವುದುಳ್ಳನಂ ಮುಳಿವುದಿಂಬಱಿದೀವನೊಳಾಳಿಕಾಱನಂ ।
ಸುಲಿದು ಬಿಸುಟ್ಟುದೋಜೆವೆರಸೆಂದು ವಿದಗ್ಧೆಯದೊಬ್ಬವಳ್ ಮುಗು
ಳ್ಮೊಲೆಗಳವಳ್ಗೆ ವೈಸಿಕಮನೋದಿಸುತಿರ್ದಳತಿಪ್ರಬಂಧದಿಂ ॥ ೪೩೦

ನೋಡುವರಂ ಮನಂಬಯಸಿದಂತಿರೆ ನಲ್ಮೆ ತುಳುಂಕೆ ಬಿಂಕದಿಂ
ನೋಡುವುದೆಯ್ದೆ ಮಾತನೊಸೆದಾಡುವರೊಳ್ ಬಗೆ ಪೆರ್ಚಿದೋಱೆ ಮಾ ।
ತಾಡುವುದಿತ್ತು ಕೂಡುವರೊಳಿಲ್ಲದ ಬೇಂಟಮನುಂಟುಮಾಡಿ ನೀಂ
ಕೂಡುವುದೆಂದು ಮುತ್ತಮುದುಗುಂಟಣಿ ಪುತ್ರಿಗೆ ದೀಕ್ಷೆಯಿಕ್ಕಿದಳ್ ॥ ೪೩೧

ಚಲನ[3]ಪ್ರೋ[3]ದ್ಭಾಗಮಿಶ್ರಾಂಜನ ಜಲಚರಭಾಗಸ್ಥಿತೋಚ್ಚಸ್ತನದ್ವಂ
ದ್ವಲಸತ್ಕಾಶ್ಮೀರರಾಗಂ ಭುಜಶಿಖರಿಬಹಿರ್ವೃತ್ತಭಾಳೇಯಚಂಚ ।
ತ್ತಿಲಕಾಂಗಂ ಚಾರುಗಂಡಸ್ಥಗಿತ ಭುಜಲತಾಶ್ಲಿಷ್ಟಕೇಯೂರಚಿಹ್ನಂ
ಕಳೆದತ್ತಾತ್ಮೇಶ್ವರಂ ಪ್ರಾರ್ಥಿಸಿ ತಿಳಿಪದೆಯುಂ ಕೋಪಮಾ ಕಾಂತೆಗಾಗಳ್॥೪೩೨

---

[1] ಟ್ಟಿತ (ಅ). [2] ತಳೀಹ (ಅ). [3] ತ್ಪ್ರೋ (ಖ.ಬ).

ಒಲವಿನೊಳುರ್ಕಿ ಕಾದಲರ ಗಾಡಿಯು ಮೆಯ್ಸಿರಿಯಲ್ಲಿ ಕಾಣ್ಬ ಕ
ಣ್ಮಲರ ಬಸಂತಮಲ್ತೆ ಬೆಳುದಿಂಗಳ ಹಣ್ಣೆಲೆಯಲ್ತೆ ನೋಡ್ಪೊಡ ।
ಗ್ಗಲಿಸದ ಕೂರ್ಮೆ ಪೀಱಿದೊಡನೆನ್ನರ ಗಾಡಿಯುಮಕ್ಕು ತುಯ್ಯಲ
ಟ್ಟೊಲೆ ನಿಧಿ ಪೋದ ಪಾಟ ಕುಟಿ ಬತ್ತಿದ ಜೇಂಗೊಡ ಬೀತ ಮಾಮರಂ ॥೪೩೩

ಒದವಿದಲಂಪು ಪೋಪಿನವನಂಕದ ಬಿಂಕದ ಪೆರ್ಚು ಪೇಚ್ಚಱಿಂ
ಗದ ಸಱಿಮಿಂಡಿಯೊಳ್ ಪೊರಳಿ ಪೊರ್ಕುಳಿಯಾದೊಡೆ ಪೋದುರ್ ಗರ್ದುರಾ ।
ಡದೆ ನಲಿಗಚ್ಚು ಕಟ್ಟಿ ಕುಡಿಯಾಗಡೆಯಾಳನೆ ಸೀಳ್ದು ಸಿಱುಂಬುಳಾಡದಂ
ಟದೆ ನೆಱನೆಂದು ಭಾವದೊಳೆ ಬಳ್ಕುವ ಸೋಂಬೆಯನಿಕ್ಕು ಕಿಚ್ಚಿನೊಳ್ ॥? ೪೩೪

ಕೊಡುವ ಗುಣಕ್ಕೆ ತಾನೊಡೆಯನೊಲ್ಮೆಗೆ ತಾನೊಡೆಯಂ ಚಲಕ್ಕೆ ತಾ
ನೊಡೆಯನೆಶಕ್ಕೆ ತಾನೊಡೆಯನಟ್ಟಿಗೆ ತಾನೊಡೆಯಂ ದಲೆಂಬ ನಾ ।
ಣೊಡೆಯನನಪ್ಪಿಯುಂ ಮಗುಬ್ದು ನಿ[1]ರ್ಲಜ[1]ಗಂಡರನಪ್ಪುತಿರ್ಪ ಪೆ
ಣ್ಬಡಣದ ಮುನ್ನಮುಳ್ಳನಿತು ಭಾಗ್ಯಮುಮೇನಱಿಯಾಗಿ ಪೋಗದೇ ॥? ೪೩೫

ಮನೆ ಸಲೆ ಹೇವಿಳಂಬಿ ಸಹಕಾರಿ ವಿಕಾರಿ ವಿರೋಧಿಕೃತ್ಸುಹೃ
ಜ್ಜನಮೆ ಸಮಾನಮನ್ನಣೆ ವಿರೋಧಿ ಪರಾಭವಿ ಶರ್ವರಿ ಶಾಲಿ ಮಾವ ಮೈ ।
ದುನನೆ ಕರಂ ಪ್ರಮಾಥಿ ನಿಜವಲ್ಲಭೆ ದುರ್ಮುಖಿಯೆಂದೊಡೆನ್ನ ಪೆಂ
ಪಿನ ವಿಭವಂ ಪ್ಲವಂಗದವೊಲಾದುದು ಮನ್ಮಥಚಿತ್ರಭಾನುವಿಂ ॥ ೪೩೬

ಮುಸುಕಿಟ್ಟೊತ್ತೆಗೆ ಸಾರ್ದ ವೃದ್ಧನೊಳೊಡಂಬಟ್ಟೊತ್ತೆಯಂ ಕೊಂಬ ತಾ
ಯ್ಗೆ ಸರೋಜಾರುಣನೇತ್ರೆ ಯವ್ವನೆ ಲಸತ್ಕಾದಂಬರೀಮತ್ತ[2]ಧೀ[2] ।
ವಸೆಯೊರ್ವಳ್ ಮುದುನಾಯ ಮುತ್ತಮುದುವೃದ್ಧಂಗೆನ್ನನಿಂತೋವದೊ
ಪ್ಪಿಸಿ ಪೊಂಗಟ್ಟುವ ಚೀಲದೊಳ್ ಮುಡುಗರಂ ತಂದಿಕ್ಕುವೆಂ ನಿಕ್ಕು[3]ವಂ[3] ॥ ೪೩೭

ಮದನನ ಕೂ[4]ಡಿ ಕಾಯ್ದುಪುದದೇಕೆಗೆ[4] ಕಾಯ್ದುಪುವೆನ್ನ ಕೂಡೆ ಪಾ
ಡಿದ ಮಱಿದುಂಬಿಯೆ[5]ನ್ನಸರ[5]ಮೇಳದ ಕೋಗಿಲೆಯೆನ್ನ ಕಯ್ಯೊ[6]ಳಾ ।
ಡಿದ[6] ಗಿಳಿಯೆನ್ನ ಪಿಂದೆ ನಡಪಾಡಿದ ಹಂಸೆಗಳಿಂತಿವಕ್ಕೆ ತ
ಕ್ಕುದನುಸಿ[7]ರ್ದಪ್ಪೆನೆ[7]ನ್ನನಿ[8]ಯನಂ ಕರೆ ನೀಂ ತಿಳಿ ನೀಂ[8] ತಳೋದರೀ ॥ ೪೩೮

(ಅನಂತನಾಥಪುರಾಣಂ, ೮-೨೩.)

---

[1] ರ್ಲಜರ (ಖ.ಬ). [2] ಬೇ (ಬ). [3] ವೆಂ (ಬ). [4] ಡಿತಾಮುಮೆನಗೀಕೆಗೆ (ಅ). [5] ನ್ನೆಸೆವ (ಅ). [6] ಳೋದಿದ (ಅ). [7] ರ್ದೆನ್ನನೆ (ಅ). [8] ಯಂಕರೆಗೇಂತಿಳಿದೇಂ (ಖ.ಬ).

ನೆವದಿಂ ಕಾಯ್ದು ಕನಲ್ದು ಪೋದಿನಿಯನಂ ಕಣ್ಮುಟ್ಟಿನೊಳ್ ಕಂಡು ಕೈ
ರವಪತ್ರಾಯತನೇತ್ರೆ ಕೀಲಿಸಿದವೊಲ್ ಕಾಲ್ಸೇಡುಗೊಂಡಳ್ ಚಳ
ತ್ಪವನಾಪಾತ ಪತಾಕೆವೊಲ್ ನಡುಗಿದಳ್ ಘರ್ಮಾಂಬುವಿಂ ತೇಂಕಿದಳ್
ನವಲಜ್ಜಾರಸದೊಳ್ ಮುಱುಂಗಿದಳನಂಗಸ್ರೋತದೊಳ್ ಕೂಡಿದಳ್ ‖ ೪೪೯

(ಅನಂತನಾಥಪುರಾಣಂ, ೮–೨೨.)

ಅರಲಂಬಿಂ ಗಱಿಸನ್ನೆದೋಱುವನನಂಗಂ ಚಂ[1]ದ್ರಮಂ[1] ಕೂಂಕುವಂ
ಕರದಿಂ ತಂಬೆಲರೆಂಬನಡ್ಡಲಿಸುವಂ ಚೈತ್ರಂ ಪಿಕಾರಾವದಿಂ ।
ಕರೆವಂ ನಲ್ಲನಗಲ್ದೊಡಂ ಮುಳಿದು ತಾವೇಗೆಯ್ದೊಡಂ ಪಲ್ಲವಾ
ಧರೆ ಕೇಳಂಜು[2]ವೆನಲ್ಲಳೀ[2] ಹದಿರನೋಪಂ ಕಾಣ್ಗುಮೆಂದಂಜುವೆಂ ‖ ೪೪೦

(ಅನಂತನಾಥಪುರಾಣಂ, ೮–೨೧.)

ನವನಖರೇಖೆಗಳ್ ಬರೆದ ಗಲ್ಲದ ರೇಖೆಗಳಂತೆ ತೋಱೆ ಮೂ
ಡುವ ಮೊಲೆಯಾಡುವಕ್ಕೆರ್ದೆಗಳೊಳ್ ಸೆಱೆಸಾರಿವೊಲಾಗೆ ನಾಡೆ ನೋ ।
ಡುವರೆಡಗಣ್ಣ ಥಾಳದೊಳೆ ಹಾಸಗೆವಾಯೆ ಮನಂ ವಿಟರ್ಗೆ ಹೋ
ದುವು ರವಣಂ ಗುಣಕ್ಕವಳ ಜವ್ವನನೆತ್ತದೊಳಾರೊ ಸೋಲದರ್‖ ೪೪೧

ನೆತ್ತದ ಸಾರಿಯಂತೆ ಮೊಲೆ ಮೂಡಲೊಡಂ ಗುಣವೇಱು ಲಜ್ಜೆ ನಾಣ್
[3]ಸ[3]ತ್ತವು ಗಾ[4]ಳು[4]ಗಣ್ ಪರಿದುವಾಸೆಯ ಪಾಸಗೆಯಂತೆ ಬೇಡಳೊಂ।
ದೊತ್ತೆಯನಿಲ್ಲ ಪೆಣ್ತನಕೆ ಪಾವುಗೆಯಂ ಗಡಿಗಟ್ಟ ರೇಖೆಗಳ್
ಪತ್ತಿದುವಾದೊಡಂ ಬಱಿಯ ಸೋಲಮೆ ನೋಡಿರೆ ಮೂಳನಾಟಮಂ ‖ ೪೪೨

(ಅನಂತನಾಥಪುರಾಣಂ, ೮–೧೫.)

ನುಡಿ ನುಡಿಯೆಂ ಚಲಂ ಚಲಮೆ ಬೇಟ್ಪುವೆ ಬೇಟ್ಪುದದೇಕದಂತೆ ಚಿಃ
ಪಡಪುಟಿದೆಲ್ಲರಂ ನಗಿಸಿಕೊಂಡಪೆಯಾಗದದಾಗದಿ . . . .
ರ್ದೆಡೆ ಮುಳುಗೆತ್ತು ಬಿಟ್ಟುಡಿದು ಕೊಂಬಟಿದಲ್ಲದು ಚೆನ್ನ ಜಾಲನಂ
ಬಿಡು ಬಿಡೆನೆಂಬ ಕುಂಟಣಿಯ ಸೂಳೆಯ ಸೂಟ್ನುಡಿಯಿತ್ತುದತ್ತಿಯಂ ‖ ೪೪೩

ಕುಂಟಣಿದೊಪ್ತೆ ಕೂರಿಸಿದ ಕಾದಲನಂ ಬಿಸುಡೆಂದು ಕೀಱಿ ಬಾ
ಯುಂಟೆನಗೆಂದು ಬಗ್ಗಿಸುವೆ ಕೂರದ[5]ರಾರ್ ಕಿಱಿ[5]ಯಂದು ನಿನ್ನನೇಂ ।

---

[1] ದುವಂ (ಅ). [2] ವಳಲ್ಲನೀ (ಅ). [3] ಪ (ಅ). [4] ಳ (ಅ). [5] **ರಾರಿಱ** (ಖ.ಬ).

ನಾಂಟವೆ ಪೂವಿನಂಬು ಕಡುಸೋವಡಿಯಾದಪೆ ನಿನ್ನ ಮೆಯ್ಯ ನು
ಣ್ಗಂಟೊಡವುಟ್ಟೆ ಮಟ್ಟಮಿರೆ ಮೀಱುವರಾರೊ ಮನೋಜನಾಜ್ಞೆಯಂ॥ ೪೪೪
(ಮಲ್ಲಿನಾಥಪುರಾಣಂ, ೭-೬೪.)

ನುಡಿ ಸವಿ ನೋಟವೊಂದು ಸವಿ ಸೋಂಕು ದಿಟಂ ಸವಿ ತೋಟಿಯಾವಗಂ
ಕಡುಸವಿ ಪೊಯ್ಯೆ ಮುನ್ನ ಸವಿ ಬಯ್ಯೆ ಕರಂ ಸವಿಯಪ್ಪು ಚುಂಬನಂ
ಗಡಣಮಿವಿಂತುಮೆಯ್ದೆ ಸವಿಯಪ್ಪುವು ತನ್ನ[1]ಪಸಾದ[1]ದಿಂದಮೆಂ
ದೊಡೆ ಸವಿ ಬೇಟದಿಂದೆ ಪೆಱತಾವುದೊ ಭಾವಿಸಿ ನೋಡೆ ನಾಡೆಯುಂ ॥ ೪೪೫
(ಚಂದ್ರಪ್ರಭಪುರಾಣಂ, ೮-೫೫.)

ಪ್ರಣಯದಿನಾದ ಹೋರಟೆಯೆ ಹೋರಟೆ ಮಾಣ್ದೊಡೆ ಕೂಟದೊಳ್ ಮನಂ
ತಣಿಯದದೊಂದು ಕೋಟಲೆಯೆ ಕೋಟಲೆ ಮಾಣ್ದೊಡಗಲ್ದ ಪೊತ್ತಿನೊಳ್ ।
ರಣರಣಕೋತ್ಥವೇದನೆಯೆ ವೇದನೆ ಮಾಣ್ದೊಡೆ ಮತ್ತಮಿನ್ನವ
ಪ್ಪಣಕಮೆ ಪುಟ್ಟುಗೆಂದೊಡಕಟೇನಪಸೌಖ್ಯರೋ ಕೂರ್ತ ಮಾನಸರ್ ॥ ೪೪೬
(ಚಂದ್ರಪ್ರಭಪುರಾಣಂ, ೮-೫೪.)

ಕೊರೆದೊಡೆ ಬೆಟ್ಟುಗಳ್ [2]ಬಿರಿ[2]ವುವುಣ್ಮುವ ಲೋಳೆಯ ಲಾಳೆಗಳ್ ಪೊನ
ಲ್ವರಿವುವು ಕೆಮ್ಮೆ ಕುಮ್ಮೆದೊಡೆ ತೋಳೊಳೆ ಜೀವವಿಯೋಗಮಪ್ಪು[3]ದೆಂ ।
ದಿರದೆರ್ದೆ[3]ಗಪ್ಪುದತ್ತಳಗಮಾ [4]ಮುದುಪಂ ಬಿಡೆ[4] ಬಂದು ಪೊಂಗಳಂ
ಸುರಿದೊಡಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ ॥ ೪೪೭
(ಪಂಪಭಾರತಂ, ೪-೧೦೦.)

ಒಡನೆಯು ಪುಣಿಸೆಯ ಮರಗಳ್
ಕೆಡೆದುವು ನಿಮಗಿನ್ನುಮಜ್ಜ ಪೆಂಡಿರ ಕಜ್ಜಂ।
ನಡೆವುದಕೆ ತೆಱಹದಲ್ಲದು
ನಡೆಯೆಂದೊಡೆ ಬಿಟ್ಟು ಬಿದಿರ್ದು ಪೋದಂ ಮುದುಪಂ ॥೪೪೮

ಕೊರೆವಳ್ ಪಲ್ಲಿಂ ಬಲ್ಕೆ
ಗರೆವಳ್ ಕನವರಿಸಿ ಬಳ್ಳುಗರೆವಳ್ ಬಾಯಿಂ ।
ಸುರಿವುದು ನೊರೆ ಕೇಳ್ವಟ್ಟ
. . . . ಳೊರ್ವಳಕೆಯ್ತ್ತಕಂಜಿ ಪೊಱಮಟ್ಟಿರ್ದಂ ॥ ೪೪೯

---

[1] ಹಸಾರ (ಗ.ಘ). [2] ಪರಿ (ಕ). [3] ದಂತಿರಪೆಮ (ಖ.ಬ). [4] ನರೆಪಂ ನರೆ (ಅ).

ಮಸಣದ ಬೂದಿಯಂ ತಳಿದರೋ ತಲೆಸೇಸೆಗೆ ಮಿಂಡರೊತ್ತೆಯೇಂ
ಬಸಲೆಯ ಬಾಡೊ ಚೌಕಿಗೆಗೆ ಬಪ್ಪುದುಮಾಗುಳಿ ಮುನ್ನ ಬಪ್ಪುದು
ದ್ದೆಸದೆ ಬೊಜಂಗನೊಳ್ ನುಡಿಯುತುಂ ಕೊರೆವಳ್ ಕಡುನಿದ್ರೆಗಣ್ಣಿಯೇಂ
ಕಿಸುಕುಳಿ ಕುಂಭಕರ್ಣನೊಡವುಟ್ಟಿದಳೋ ಹಡೆದುಂಬ ಸೂಳೆಯೋ ॥ ೪೫೦

ಕುಡಿದೊಡೆ ಪೊಟ್ಟೆಯಿಂದೆ ಬೞಿನೀರ್ ಪೊಱಪಾಯ್ವುವೆ ಸುತ್ತಿ ಕಾಲನೇಂ
ತೊಡರ್ವುವೆ ದಾಂಟುವಲ್ಲಿ ನಿಱಿ ಪುತ್ತುರಿಯೂದಿದೊಡಂತೆ ಬಾಯನೇಂ ।
ಸುಡುವುದೆ ಮುಟ್ಟೆ ದೇವರೊಳೆ ಕೀಲಿಪುದೇ ಕರಮೇಕೆ ಸೂರುಳೆಂ
ದೊಡರಿಸ[1]ಲಿನ್ನದೇಕೆಲೆಗೆ ಮನ್ನಿಪ ಮನ್ನಣೆಯುಳ್ಳಡೆಯ್ದುವೇ[1] ॥ ೪೫೧
(ಚಂದ್ರಪ್ರಭಪುರಾಣಂ, ೮-೬೦.)

ನುಡಿಯೆಲ್ಲಂ ಪೋೞೆ ಸೂರುಳೊಳ್ ನಿಱಿ ಪೊಸಂತಿಲ್ [2]ಪುತ್ತುವಾಯ್ಪೊಂಗೊ
ಕುಡಿನೀರೊರ್ವಂಗೆ[2] ಕಮ್ಮನಪ್ಪ ಬೞಿನೀರೂರೂರ ದೈವಂಗಳುಂ । [ೞಲ್
ಪಡಿಗೆತ್ತೋಡಿದುವೀಕೆಗಂಜಿ [3]ವಿಟರೆಂ[3]ದುಂ ಗೆಂಟು ತಮ್ಮಜ್ಜಿ ಸ
ತ್ತೊಡಮೀ [4]ಮಾಯದ[4] ಪೆಣ್ಣ ಕಣ್ಗೆ ಪುಸಿಕಣ್ಣೀರಲ್ಲದೇಂ ಬರ್ಕುಮೇ ॥ ೪೫೨
(ಲೀಲಾವತಿ, ೨-೧೦೨.)

ಸಿರಿ ಚೆಲ್ವಂ ಸಿರಿಯಲ್ಲಿ ರೂಪು ಮಿಗೆ ಚೆಲ್ವಂ ರೂಪಿನೊಳ್ ಮತ್ತೆ ಮುಂ
ಬರೆಯಂ ಚೆಲ್ವಮಿನಿತ್ತುಮೆಯ್ದೆ ಕಡು ಚೆಲ್ವಂ ಬೇಟದಿಂ ಬೇಂಟಮುಂ
ಬರಸಂ ಮನ್ನಿಸದಂದನಾಯಕಮದೇಕಾ ಲಕ್ಷ್ಮಿಯಾ ರೂಪುಮಾ
ಹರೆಯಂ ಬೇವಿನ ಸುಗ್ಗಿ ಪಾೞ್ಮನೆಯ ಚಿತ್ರಂ ಕಾಡ ಚಂದ್ರಾತಪಂ ॥ ೪೫೩
(ಅನಂತನಾಥಪುರಾಣಂ, ೮-೫೮.)

ಮತ್ತೆ ಬೊಜಂಗರಿಲ್ಲ ಪೊಱ[5]ಗೊ[5]ಚ್ಚತವೇಂ ನಿನಗುಂಟು [6]ಕೊಳ್ಗೆ[6] ಚ
ಕ್ಕೊತ್ತೆಗೆ[7]ಯೊತ್ತೆಯಿತ್ತು[7] [8]ಶನಿ[8]ಯಂತಿರೆ [9]ನಿಲ್ವರೆ[9] ಸೂಳೆ ಕೇಳ[10]ದೀ[10] ।
ಯೊತ್ತಗೆ ನಾಣ್ಚಿಯುಂ ಪೊಱಮಡಾಂ ಮೊರೆಯಿಟ್ಟಪೆನೆಂದು ಸುತ್ತಿದಳ್
ಮುತ್ತಿದಳಬ್ಬೆ ಚೌ[11]ಕಿ[11]ಗೆಯನೊರ್ಬಳೆ ಮಾರಿಯ ಮೂರಿಯಂದದಿಂ ॥ ೪೫೪
(ಲೀಲಾವತಿ ೨-೧೨೨.)

---

[1] ಲಣ್ಣಪೆಣ್ಣ ಪುಸಿಮನ್ನಣೆಯುಳ್ಳೊಡಮಂತದೆಯ್ದದೆ (ಅ). [2] ಪೊಂಗೊೞಲ್ ಪತ್ತುವಾಯ್ಕುಡಿನೀರೀಕೆಗೆ (ಅ). [3] ದಿಟವೆಂ (ಖ.ಗ.ಬ). [4] ನಂಜಿನ (ಅ). [5] ಸೊ (ಕ.ಖ). [6] ತೋಳ (ಅ). [7] ಪೊಕ್ಕೆಯಿಂತು (ಅ). [8] ಸುನಿ (ಅ). [9] ನಿಲ್ತರೆ (ಖ.ಬ). [10] ರೋ (ಅ). [11] ರಿ (ಖ.ಬ).

ಹಡಣಂ ಪೋದತ್ತು ಕುತ್ತಂ ಕಟಿದುದು ಶನಿ ಪಿಂಗಿತ್ತು ಗುಹ್ಯಾಂಗದಿಂ ಮು
ತ್ತಿಡೆಗಪ್ಪಿತ್ತೆಂದು ಜನ್ಮಂ ಹಱಿದುದುಟಿದುದೆಂತಾನುಮೇಱಾಳಿ ಭಂಡಂ ।
ಕಡು ಭಂಡಂ ಕೂಸಿಗೀಗಳ್ ಬಿನದದ ತಡೆ ಬಿಟ್ಟಿತ್ತವಳ್ಗೆಂದದೊರ್ವಳ್
ನುಡಿವಳ್ ನಿಶ್ಚಿಂತದಿಂ ಕುಂಟಣಿ ನೆರೆಯವರೊಳ್ ಸ್ವೇಚ್ಛೆಯಿಂದಂ ನಗುತ್ತಂ ॥

ಗಾಳಿಸು ಗೆಲ್ವನಂ ಹರಹು ಹೂಜೆಗನಂ ಸುಲಿ ಸುತ್ತುಗಾಱನಂ
ತಾಳಿಸು ತೇ[1]ಪೆಯಂ[1] ಕುಡದೆ ಕಾಡುವನಂ ರಸಬೋನವೆತ್ತು ಮಾ ।
ಕಾಳಿಗೆ ಧಾಳನಂ [2]ನೆ[2]ಗಪು ಟಕ್ಕಿಪನಂ ತುಟಿ ಮೇಕುದೋರ್ಪನಂ
ಮಾಳ[3]ಟಿ[3]ಗಿಕ್ಕು ಪೂಜ್ ಪುಸಿವನಂ ಪೊ[4]ಸತಿ[4]ಕ್ಕು ಗೆ ಪ[5]ಚ್ಚೆಗಾ[5]ಱನಂ ॥ ೪೫೬

(ಲೀಲಾವತಿ, ೨–೧೦೭.)

ಮನೆಯೊಳ್ ಕಾಲ್ ನೆಲೆಗೊಂಡು ನಿಂದಱಿಯನೀ ಜೋಕಾಱಿಯಂತಿರ್ಕೆ ಸೊಂ
ಬನೊಳೊಲ್ದಾಡುವಳೊಲ್ಲಳಾ ಹರಳಿಗಂ ಕದ್ದೊ[6]ಯ್ವ[6]ನೇನಿರ್ದೊಡಂ ।
ತನಗಿಂಬಿಲ್ಲದೆಗೆ[7]ಯ್ವ[7]ನಂತದಱಿನೀ ಪೆಣ್ ಪೆ[8]ಣ್ಣನೊಳ್[8] ಗಂಡುಗಂ
ಡಿನೊಳಾವಾವ ಮುಹೂರ್ತದೊಳ್ ಪಡೆದನೀ ಪಾಡಾದ ಮೂಳಂಗಳಂ ? ॥ ೪೫೭

ಪೂವಿನ ಸುಗ್ಗಿ[9]ಯಂತೆ[9] ಪೊಸಬೇಟಮದಾದೊಡೆ [10]ಕಣ್ಣೊ[10]ಳೋಪರಂ
ಕಾವುದು ಸುತ್ತಿ ಮುತ್ತಿ ಸವಿಯೊಳ್ ಸೆಱೆಗೆಯ್ವುದು ಜೀವಮುಂ ತಡಂ ।
ಗಾವುದು ಮೆಚ್ಚಿತಂ ಸಲಿಸಿ ನಲ್ಲರ ಮೆಯ್ಸುಖಕೆಂದು ದೇಹಮುಂ
ತೇವುದು ತಾನೆ ತನ್ನ ಪಗೆಯಪ್ಪು[11]ದೆ[11] ಬರ್ಪುದೆ ಪೋದ ಜವ್ವನಂ ॥ ೪೫೮

(ಲೀಲಾವತಿ, ೧೪–೪೩.)

ಬೇಟದ ಸುಗ್ಗಿ ನಾಲ್ಕು ದಿನವಾ [12]ದಿನದೊ[12]ಳ್ [13]ಬಸ[13]ಮಾದ ಗಂಡರೊಳ್
ಕೂಟಮೆ [14]ಕೋ[14]ಟಿಯೆಂದು ಸಮಸಂದೆವೆಯಂ ಮಱೆಯಾಗದಂತು ಬಾಯ್ ।
ನಾಟಿರೆ ಬಾಯೊ[15]ಳಿರ್ಪು[15]ದುಗದಂತೆ ತೊ[16]ಡರ್ದಿ[16]ರದೇಕೆ ತೋಟಿಯಂ
ಪಾಟಿಸಿ ತಾಮೆ ತಮ್ಮಗಳನಾಱಡಿಗೊಳ್ವರೊ ನಾಡ [17]ನಾಡೆಯರ್[17] ॥ ೪೫೯

(ಲೀಲಾವತಿ, ೧೪–೪೦.)

ನಸುನೋಟಂ ಜನವಶ್ಯಮಾಕೃತಿ ಗತಿಸ್ತಂಭಂ ವಚಃಪ್ರೌಢಿ ಭಾ
ವಿಸೆ ಸಮ್ಮೋಹನಮಂತ್ರವಾದರಣೆ ಚಿತ್ತಾಕರ್ಷಣಂ ಕೂಟವ ।

---

[1] ವನಂ (ಅ). [2] ತೆ (ಖ.ಬ). [3] ಟೆ (ಅ). [4] ಸೆದಿ (ಅ). [5] ಚ್ಚೆಕಾ (ಖ.ಬ.ಗ). [6] ಯ್ವೆ (ಖ.ಬ). [7] ಯ್ಯ (ಖ.ಬ). [8] ಣ್ಣನೊಳಂ (ಖ.ಬ). [9] ಯಲ್ತೆ (ಅ). [10] ಕಾಣ (ಖ.ಬ). [11] ದು (ಖ.ಬ). [12] ದೆಸೆಯೊ (ಅ). [13] ವಶ (ಖ). [14] ತೋ (ಅ). [15] ಳಪ್ಪು (ಅ). [16] ಡಂಕಿ (ಅ). [17] ಗೊಟ್ಟಿಯರ್ (ಅ).

ನ್ಯಸುಖೋತ್ಪಾದನಮಂತ್ರ ದುರ್ಧರ ವಿಯೋಗಂ ಮಾರಣೋದಾರಯಂ
ತ್ರಸಮಂ ತಾನೆನಿಸಲ್ಕೆ ಸಾಲದೆ ಪುರಂಧ್ರೀಮಾತ್ರಮೆಂಬಾರ್ತೆಯೊಳ್ ‖ ೪೬೦

ಅರುಣಾಧರೆ ಶಶಿಮುಖಿ ಕನ
ಕರೋಚಿ ಪುಂಖಾಂಗಿ ಗುರುಕುಚದ್ವಯೆ ಸಿತವಿ ।
ಸ್ಫುರಿತದೃಶೆ ಮಂದಯಾನೆಯ
ನುರುಮುದದಿಂ ವಾರವನಿತೆಯೆನ್ನದರೊಳರೇ ‖ ೪೬೧

ಅತಿರಕ್ತರಿರ್ಪರುಂ ಗಡ
ರತಿ ಗಡ ರಾಗೋತ್ಕಟಂ ಗಡೇಕಾಂತಗೃಹ ।
ಸ್ಥಿತಿಗಡಮೇನೆಂಬುದೊ ಪೇೞ್
ಸತತಂ ತಂತಮ್ಮ ಪದದ ಮೆಯ್ಯುೞಿದವರಾರ್ ‖ ೪೬೨

ನೆರೆ ಪಱಿದೋಡೆ [1]ಕೇರಿ[1] ಪೊಱಗಿಕ್ಕೆ ಜನಂ ಬೆಱಗಾಗೆ ಬೀದಿಯೊಳ್
ನೆರೆಯೆ ಕುಕಿಲ್ವ ಕೂಕಿಱಿದು ಕೊಂದೊಡೆ ಸಾವವೊಲಾರ್ದು ಕೂಡದೊಂ !
ದರಸಿಯದೊಂದು ಹಾದರಮೆ [2]ಜಕ್ಕಿಯ ಕೂ[2]ಟಮೆ ಕೂಟದೇೞ್ಗೆಯೊಳ್
ಸುರಕೆನಬಾರದೆಂಬ ಬೆಲೆವೆಣ್ಣಿನ ಕೂಟದೊಳಿಕ್ಕು ಕಿಚ್ಚುಮಂ ‖ ೪೬೩
(ಅನಂತನಾಥಪುರಾಣಂ, ೮–೫೭.)

ಬಾರ ಮರಾಳಿಕಾಗಮನೆ ನೋಡ ಚಕೋರವಿಲೋಲನೇತ್ರೆ ನಿಂ
ದಾರಯ ಪೀವರಸ್ತನನಿತಂಬಭರಾಲಸೆ ಕೇಳ ಕಾಮಕಾ ।
ಳೋರಗ ಕೇಶಪಾಶೆ ಎನಗುತ್ತರಮಂ ಕುಡ ಚಾರುವೇಣುವೀ
ಣಾರವೆ ನೀನದಾರ ಮಗಳೆಲ್ಲಿಗೆ ಪೋದಪಯಾವುದಾಶ್ರಯಂ ‖ ೪೬೪
(ಶಬ್ದಮಣಿದರ್ಪಣಂ, ೧೨೮ನೆಯ ಸೂತ್ರಕ್ಕೆ ಉದಾಹರಣೆ.)

ಸರಸಿಜನೇತ್ರೆ ಪೂರ್ಣಶಶಿಮಂಡಲವಕ್ತ್ರೆ ಗಭೀರವಾಣಿ ದಿ
ಗ್ವರವರಕೀರ್ತಿನಾಥವರವಂಶಗುಣಾಸ್ಪದಚಿತ್ರಪುತ್ರಿಯಾ ।
ಸುರತವಿಲಾಸವಲ್ಲಿಗವನಿರ್ದುದೆ ಮಂದಿರವೇಕೆ ದೂರದಿಂ
ಪರಿಕಿಸಿ ಬಂದು ರಾಗದೆ ತಳಾಱಿಕೆ ನಿನ್ನಯ ಬೆನ್ನೊಳೋಪಳಾ ‖ ೪೬೫

ಮಿಡಿಯಂ ಸಾರ್ಚಿ ಪಳಂಚಿ ಸೋರ್ಮುಡಿ ತಡಂಗಾಲ್ವೊಯ್ಯೆ ಸಂವ್ಯಾನಮು
ಳ್ಳುಡೆಯಂ ವಾಮಕರಾಗ್ರದಿಂ ಪಿಡಿದು ವೃತ್ತೋತ್ತುಂಗವಕ್ಷೋಜದಿ ।
ಟ್ಟೆಡೆಯೊತ್ತೊತ್ತಿನೊಳೆತ್ತಲುಂ ಕೆದಱಿ ಮುಕ್ತಾಮಾಲೆ ಬಂದೋಪವಳ್
ಪಿಡಿದಪ್ಪಾಡಿ ಕನಲ್ದು ಪಕ್ಕೆದಲೆಯಂ ಪೋಪೋಪನಂ ಕೋಪದಿಂ ‖ ೪೬೬

---

[1] ಕೇಱಿ (ಅ). [2] ಜಕ್ಕಿಯರೂ (ಅ).

ನಡುಗೆ ತನು ಪೊಡರೆ ಬಿಸುಸುಯ್
ಗುಡುಗುಡನುಗೆ ಬಾಷ್ಪವಾರಿ ಕಾಲತ್ರಯವುಂ ।
ಪಡೆದೋಪಳ ಮುಳಿಸಿತ್ತುದು
ಕಡು ಚೆಲ್ವಂ ಪ್ರಿಯತಮಂಗೆ ಬಕ್ಕಂಬಯಲೊಳ್ ॥ ೪೬೭

ಸವಿ ತವದನ್ನೆಗಂ ಮನದ ಪತ್ತುಗೆಗಳ್ ಕಿಡದನ್ನೆಗಂ ಪೆಱಂ
ಗವಳೆಡೆಯಾಡದನ್ನೆಗಮೊಡಂಬಡುಮೇವಮುಮಿಲ್ಲದನ್ನೆಗಂ ।
ತವಿಪುದು ತನ್ನನೊಪ್ಪಿಸುವುದೆಂದುದನೆಂಬುದು ಕೂರೆ ಕೂರ್ಪುದೋ
ಱುವುದು ಪಲುಂಬಿ ಪೋದ ಬಟಿಕಂ ಪರಪು[1]ಬ್ಬೆಗ[1]ಯಾಗಯುಂಗಳಂ ॥ ? ೪೬೮
(ಚಂದ್ರಪ್ರಭಪುರಾಣಂ, ೮-೮೧.)

ವ್ಯಾಳಬಿಡಾಳದಂತುಗುರ್ಗಳಂ ನಲಿಯಾಡುವ ಸೊಕ್ಕಿ ಬಂದ ಶುಂ
ಡಾಳದ ಮಾಣ್ಕೆಯಿಂದೆ ಕರದಿಂದೆ ತುಡುಂಕುವ ಮೆಯ್ಯ ಢಾಳ ಕೊಂ ।
ಡಾಲದೊಳೆನ್ನನೋಲಗಿಪ ಬರ್ಪದೊಳಿಂದುಟಿದುವೊ ಡಾಳಚಂ
ಡಾಳಸುಢಾಳವಾದಿನಿಯನುಂ ಕೆಲನುಂ ನಗುವಂತೆ ಮಾಡಿದ್ಯೆ ॥ ? ೪೬೯

[2]ಉರದಿಂ[2] ಬರಿಯಿಂದಗ್ರಂ
[3]ಬರೆ ಕೆಂಪೆಸೆಯಲ್ಕೆ[3] ನೀಳ್ದ ನಖರೇಖೆಯೆಸಪ್ ।
[4]ಪೊ[4]ರೆಯೆನಿಸೆ ಪದ್ಮಕುಟ್ಮಳ
ದಿರವಂ ಪರಿಭವಿಸಿ[5]ದತ್ತು ತ[5]ತ್ಕುಚಯುಗಳಂ ॥ ೪೭೦
(ಚಂದ್ರಪ್ರಭಪುರಾಣಂ, ೮-೫೬.)

ಮಿಱುಗುವ ವಿದ್ರುಮಾಧರದ ಮಧ್ಯದೊಳಾಯತವೃತ್ತಮಾದ ನು
ಣ್ಗೞಿಯಿದು ಮನ್ಮನಕ್ಕೆ ಪಡೆದಪ್ಪುದು ಮನ್ಮಥವಹ್ನಿತಾಪದಿಂ ।
ಮಱುಕಮನಪ್ಪುಕೆಯ್ದುರ್ದೆಯೊಳಿರ್ಪುದನೊಲ್ಲದೆ ಬಾಯ ಬಾಗಿಲಿಂ
ನೆಱೆ ಪೊಱಮಟ್ಟು ಪೋದಿವಳ ಲಜ್ಜೆಯ ಪಜ್ಜೆಯಿದೆಂಬ ಪೋಲ್ವೆಯಂ ॥ ೪೭೧
(ಚಂದ್ರಪ್ರಭಪುರಾಣಂ, ೮-೫೭.)

ಚುಂಬಿ[6]ಸಿ[6] ಬೇಗಿ ಬೆಳ್ಪಡರ್ದ ಬಾಯ್ದೆಱೆಯಾಳ್[7]ಸಿ[7]ದಪ್ಪಿನೊತ್ತಿನಿಂ
ದಂ ಬಿಡೆ ಗುಜ್ಜುಗೊಂಡ ಮೊಲೆ ಪೋರ್ಕುಳ್[8]ಯಿಂ[8]ದಮೆ ಹಂತಿದಪ್ಪಿ ತಾ ।

---

[1] ತ್ತರೆ (ಅ), ದ್ಧಗ (ಚಂ.ಪ್ರ.ದ ಓಲೆಯಪ್ರತಿ). [2] ಕೊರಲಂ (ಅ). [3] ಬರೆಗಂ ಕೆಂಪೆಸೆಯೆ (ಅ). [4] ಗೊ (ಅ). [5] ತೀಕೆಯು (ಅ). [6] ಸೆ (ಖ). [7] ಸ (ಖ.ಬ). [8] ಯಂ (ಖ.ಬ).

ಱುಂಬಟಿಯುಂ ತೆರಳ್ದ ಕುರುಳುಣ್ಮೆ ಬೆಮರ್ ನಸುಬಾನಲಾದ ಬೊ
ಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡಿಪುವೀ ಲತಾಂಗಿಯಾ ॥ ೪೭೨

(ಚಂದ್ರಪ್ರಭಪುರಾಣಂ, ೮-೭೨.)

ಉನ್ನತಿಯಿಂದುತ್ಕಂಠತೆ
ಯನ್ನೆಱೆ ನಿನಗೀವುದಿವರ್ಗೆ ಮಾಡವೆ ಕೊರ್ಬಂ ।
ನಿನ್ನನೆರ್ದೆಗಿಡಿಪುವುಟಿದರ
ನಿನ್ನೆರ್ದೆಗಿಡಿಸವೆ ಲತಾಂಗಿ ಕಠಿನಕುಚಂಗಳ್ ॥ ೪೭೩

(ಚಂದ್ರಪ್ರಭಪುರಾಣಂ, ೮-೭೩.)

ಒಸೆದಪ್ಪುವ ಪದದೊಳ್ ಮೆಯ್
ನಸುಸೋಂಕದ ಮುನ್ನಮೆ[1]ದೆಯೊಳೆಡೆವೊಕ್ಕವೊ[1]ಲು ।
ವಿರ್ಸುವ ಪುಳಕಕ್ಕೆ ಕಂಟಕ
ವೆಸರಂ ಕೊಟ್ಟುಜನ ಸುಜನತೆಗೆ ಬೆಱ[2]ಗಾದೆಂ[2] ॥ ೪೭೪

(ಚಂದ್ರಪ್ರಭಪುರಾಣಂ, ೮-೭೫.)

ಪತ್ತುಗೆಗೆಟ್ಟುವೊಂದು ನುಡಿಗೊಂಬತನೆಂದೆರಡೆಂಟನೀಗಳಾ
ನೆತ್ತಱಿವಂದಮೆಂಬ ತೆಱದಿರ್ದಪೆ ನಲ್ಲನ ತಾಯ ತಂದೆಯ ।
ಚೊತ್ತಿದ ಮೂಱು ಮೋಹಮುಮನೇಱಿಸಿವೋಗದೆ ಕಲ್ತೆ ನಾಲ್ಕು ಸೂೞ್
ಸತ್ತೊಡ[3]ದಾರೆಯೆಂದಱಿಪ[3]ಲ್ಕೈದೊಲವೆಯ್ದುಗುಮಿನ್ನೆಗಂ ಪ್ರಿಯಂ ॥ ೪೭೫

(ಚಂದ್ರಪ್ರಭಪುರಾಣಂ, ೮-೭೯.)

ಒಲವೊಳಗಾಗೆ ದೈವದಿನದಂ ಬಡವಂ ನಿಧಿಗಂಡ ಮಾಳ್ಕೆಯಿಂ
ಸಲಪಲುವೋವಲುಂ ಸುಖಮನಾರ್ಜಿಸಲುಂ ಬಗೆದಾರದೊಳ್ಪನೊ ।
ಕ್ಕಲಸಿಕೆಯಂ ನಿಮಿರ್ಚಿ ಪುರುಡಂ [4]ಪೊಸೆದೆಯ್ದೆ ಪೊಲಂಬುದಪ್ಪಿ[4] ಕೋ
ಟಲೆಗೊಳಗಪ್ಪ ಪಾೞ್ಮನದ ಮಾನಸರಂ ಸುಡು ಸಂದ ಗೊಡ್ಡರಂ ॥ ೪೭೬

(ಚಂದ್ರಪ್ರಭಪುರಾಣಂ, ೮-೮೦.)

ತಿವುರಾತ್ಮದ್ಯುತಿ ತೋರ್ಪ ಕರ್ಪುರ ತಿಲಕಂ ತಾರಾಗಣಂ ಬಂದು ನೋ
ಡುವ ಯೂಥಂ ಮಧು ತೆತ್ತಿಗಂ ವಿರಹಿ ಮಾಱಾಂಕಂ ನೃಪಂ ಚಿತ್ತಸಂ ।
ಭವನಾಗಲ್ ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೇಱಿದಂ
ನವಸಂಧ್ಯಾರುಣಭಾಸಿ ವಾಸವದಿಶಾಶೈಲೇಂದ್ರಮಂ ಚಂದ್ರಮಂ ॥ ೪೭೭

---

[1] ಡೆಯೊಳೆಡೆಗುಡದವೊ (ಅ). [2] ಗಪ್ಪೆಂ (ಅ), ಗಾಗೆಂ (ಖ.ಬ). [3] ವಾರ್ತೆ ಯಿಂತಿವಳ (ಖ.ಬ). [4] ಪೊಸತೇವಮನುಂಟುಮಾಡಿ (ಖ.ಬ).

ತೊಲಗೆ [1]ಮನ[1]ಸ್ತಮಂ ಕಿಡೆ ನಿಜೇಕ್ಷಣರಾಗದ ಸಂಜೆಗೆಂಪು ನಿ
ರ್ಮಲ ದರಹಾಸಚಂದ್ರಿಕೆಯುಮಂ ಕುಡೆ ಕಾಲ್ವಿಡಿದೋಪ[2]ನೋಪಳಂ[2] ।
ತಿಳಿಪುವುದಂ ಪ್ರಸನ್ನತೆಯಿನೋಪಳ ವಕ್ತ್ರಹಿಮಾಂಶುಮಂಡಳಂ
ಬೆಳಗಿದುದುಣ್ಮಿ ಪೊಣ್ಮೆ ಜಘನದ್ರವಚಂದ್ರಶಿಲಾಂಬುನಿರ್ಝರಂ ॥ ೪೭೮

(ಜಗನ್ನಾಥವಿಜಯಂ, ೧೬–೧೨೨.)

ಶಕುನಿವ್ರಾತಾರವಂ ಮನ್ಮಥರಥಬಲವದ್ಧ್ವಂಕೃತಂ ಕಂಠನಾದಂ
ಮಕರಾಂಕಜ್ಯಾಲತಾಟಂಕೃತವತಿದೃಢಹಸ್ತಪ್ರಹಾರಸ್ವನಂ ದ ।
ರ್ಪಕಭೇರೀಭಾಂಕೃತಂ ತಾನೆನೆ ಯುವತಿರತಾರಂಭ ಕೋಲಾಹಲಧ್ವಾ
ನಕಮಂತಾ ಕಂತುಸೇನಾಕಳಕಳದವೊಲಾಶ್ಚರ್ಯಮಂ ತಂದುದಾಗಳ್ ॥ ೪೭೯

(ಜಗನ್ನಾಥವಿಜಯಂ, ೧೬–೧೨೩.)

ಪೊಡವರ್ಪುತ್ತುಂಗಸ್ತನಂ ಕೊಂಕಟಿದು ನಿಮಿರ್ದ ನೀಲಾಳಕಂ ಜೋಲ್ದು ಬಂಬ
ಲ್ಮುಡಿ ಬೆಳ್ಪೇಱಿರ್ದ ಬಿಂಬಾಧರಮಣಿ ನಸುಕೊಂಕಿರ್ದ ಕರ್ಣೋತ್ಪಲಂ ಕೆಂ ।
ಪಡರ್ದಾಲೋಲೇಕ್ಷಣಂ ಕಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ
ಕುಡೆ ನೆಮ್ಮಿರ್ದೋಪನಂ ಮೆಯ್ಬೆಮರನೆಲರೊಳಂದಾಱಿಸುತ್ತಿರ್ದಳೊರ್ವಳ್ ॥

(ಜಗನ್ನಾಥವಿಜಯಂ, ೧೬–೧೨೪.)

ಮದಿರಾಪಾನಕ್ಕೆ ಮೆಯ್ಯಾರದೆ ಸುಟಿವೆಲರಂ ಪಾರದುದ್ಯಾನಮಂ ಸಾ
ರದೆ ಮಲ್ಲೀದಾಮಮಂ ಸೂಡದೆ ಹಿಮರುಚಿಯಂ ನೋಡದಾನಂದದಿಂ ಪಾ ।
ಡದೆ ಕೆಯ್ಗೆಯ್ವೊಂದಲಂಪಿಲ್ಲದೆ ಕೆಳದಿಯರೊಳ್ [3]ಸ[3]ಲ್ಲದೇಕಾಂತದೊಳ್ ನಿ
ಲ್ಲದಿರಾಂ ಬರ್ಪನ್ನವಾಯಂ ನಿನಗಿದು ವಿಗತಾಪಾಯ[4]ಮಿಾ ಪೇಟ್ದು[4]ಪಾಯಂ ॥

(ಜಗನ್ನಾಥವಿಜಯಂ, ೧೬–೧೨೭.)

ಮುಕುಳಂ [5]ಮಾದಲರಾ[5]ಯ್ತು ಮೆಯ್ಯರಿಸಿನಂ ಕಂಪೋಡಿತೀ ಬೆಂದ ದೀ
ಪಿಕೆಯುಂ ಕರ್ಗುಡಿವಟ್ಟುದೆನ್ನಿನಿಯನಿನ್ನುಂ ಬಾರನೇಕೆಂದು ದ ।
ರ್ಪಕದಾವಾನಲದ[6]ಗ್ಧ[6] ತುಂಗಕುಚಶೈಲಾಗ್ರಕ್ಕೆ ಸುಯ್ದಂಬಕಾಂ
ಬುಕಣಾ[7]ಸಾರ[7]ಮನಿಕ್ಕಿದಳ್ ಮದನವೋಹಾಸಾರಮೆಂಬಂ[8]ದದಿಂ[8] ॥ ೪೮೨

(ಲೀಲಾವತಿ, ೨–೪೮.)

ನಗಲೀ ನಾಯಕಸಾರಕೀನಯನವೃಂದಂ ಸುತ್ತಿನೊಳ್ಪಾದ ಮ್ಯೆ
ಲಗೆವೆಳ್ದಿಂಗಳ ಸೋಂಕು ಸ್ವೈರಿಸದವೊಲ್ ಪೊಂಕಲ್ ಮಡಲ್ವಂದು ರಾ

---

[1] ತಮ (ಬ.ಬ). [2] ಳೋಪನಂ (ಬ.ಬ). [3] ಸೊ (ಅ). [4] ಮಪ್ಪೊಂದು (ಅ). [5] ಬಾಯ್ದೆರಲಾ (ಬ.ಬ). [6] ಗ್ಧ (ಅ) [7] ನೀಕ (ಅ). [8] ತೆವೋಲ್ (ಅ).

ಜಗೃಹದ್ವಾರನಿವಿಷ್ಟನಾಗಿ ಸುಖಸಂದೋಹಕ್ಕೆ ಬೀಡ್ಕೊಟ್ಟು ಸೆ
ಜ್ಜೆಗೆ ಬಂದಂ ಸ್ತಿಮಿತಾಗತೋತ್ಕುಪಿತಕಾಂತಾಪಾಂಗಮಾಲಾಹತಂ ॥ ೪೮೩

ಜಗದಧಿಪತಿಯರಮನೆಯಂ
ಪುಗುವಲ್ಲಿ ಗೃಹಪ್ರವೇಶಮಂಗಳತೂರ್ಯಂ ।
ಮಿಗೆ ಮೊಟಗಿತ್ತೆನೆ ಪೊಣ್ಮಿದು
ದು ಗಭೀರಂ [1]ತತ್ತ್ರಿತೀಯಭೇರೀನಾದಂ[1] ॥ ೪೮೪

(ಚಂದ್ರಪ್ರಭಪುರಾಣಂ, ೮–೯೩.)

ಮುನಿದು ಕಟಾಕ್ಷದಿಂದಡ[2]ರೆ[2] ನೋಡೆ ಭಯಾದ್ರ್ರತನಂತೆ ತೋಱಿ ಸ
ಮ್ಮನಿಸದೆ ಮತ್ತೆ ಕಾಯ್ದೊದೆಯೆ ಕಾಲ್ವಿಡಿದೋವದೆ ಬಯ್ಯೆ ತಳ್ತು ಚುಂ ।
ಬನಮನೊಡರ್ಚೆ ತತ್ತದುಚಿತಕ್ರಿಯೆಯಿಂದವೆ ನಂದೆವೊಯ್ದು ತ
ನ್ಮನಮುಮನಂತೆ ಸಂತಸಮನೆಯ್ದಿಸಿದಂ ರತಿಸೌಖ್ಯ[3]ದಿಂ[3] ನೃಪಂ ॥ ೪೮೫

(ಚಂದ್ರಪ್ರಭಪುರಾಣಂ, ೮–೯೪.)

ಸುದತಿ ರತಾಂತಸೌಖ್ಯಮನಧೀಶನ ದೇಹದಿನಂದು ಪೋಗಲೀ
ಯದೆ ಪಿಡಿದಂದದಿಂ ತೊಡೆಯ ತೋಳ ತಗುಳ್ಪಮರ್ದೊಪ್ಪೆ ನಾಡೆಯುಂ ।
ಪದೆದಮರ್ದಪ್ಪಿದಂತಿರಮರ್ದಪ್ಪಿರೆ ಬಂದ ಸುಷುಪ್ತಿ ಚಿತ್ತಮಂ
ಪುದಿಯೆ ಮಹೀಶನಿರ್ದನಿನಿಸಂ ನಿಜಯೋಗದೆ ಯೋಗಿಯಿರ್ಪವೋಲ್ ॥ ೪೮೬

(ಚಂದ್ರಪ್ರಭಪುರಾಣಂ, ೮–೯೫.)

ನೊರೆಯೊಡನೆ ತಡಿಗೆ ಬೆಳ್ದಾ
ವರೆಯ ಕಟಲ್ದೆಸಟ್ಟಿಳ್ದೈದೆ ಕೊಳನೊಳ್ ಸಾರ್ವಂ ।
ತಿರೆ ಪಡುವಣ ದೆಸೆಗಿರದೋ
ಸರಿಸಿರ್ದುವು ತಿಂಗಳೊಡನೆ ಮಿಾನ್ಗಳ್ ನಭದೊಳ್ ॥ ೪೮೭

(ಚಂದ್ರಪ್ರಭಪುರಾಣಂ, ೮–೯೬.)

ರತಿನಾಟಕಾಭಿನಯಮಂ
ಕೃತಕೃತ್ಯಂಮಾಡಿ [4]ಯೊಯ್ಯನಾ[4]ಗಿರೆ ದೀಪ ।
ದ್ಯುತಿ ಯುವತಿಯರೊಳ್ ನಿದ್ರಾ
ವತಾರಮಾದತ್ತು ಮೂಡವೆಳಗಪ್ಪಾಗಳ್ ॥ ೪೮೮

(ಜಗನ್ನಾಥವಿಜಯಂ, ೧೬–೧೩೭.)

---

[1] ತತ್ತ್ರಿಯಾಮ ತೂರ್ಯಾರಾವಂ (ಅ). [2] ರಿ (ಖ.ಬ). [3] ಮಂ (ಖ.ಬ).
[4] ರಯ್ಯಮಾ (ಅ).

ತೆರೆವೊಯ್ಲಿಂದೆಟ್ಟಿ ಕಾಸಾರದ ಪರಿಸರದೊಳ್ ನಿದ್ರೆಗೆಯ್ವಂಚೆವಿಂಡಂ
ದರಹಾಸಶ್ರೀಯನಂಭೋಜಿನಿಗೆ ಪಡೆದು ನೆಯ್ದಿಲ್ಗಳಿಂದುಳ್ಳಲರ್ವಂ ।
ಬುರುಹಕ್ಕೆಟ್ಟಿರ್ಪ ಭೃಂಗಂಗಳ ಗಱಿಯೆಲರಿಂ ಕೊರ್ಬಿ ಚಾಂಡಾಲಗೇಯ
ಸ್ವರದೊಳ್ ತಳ್ಪೊಯ್ದತಿಸ್ವೈರದೆ ಸುಟಿದುದು ವೈಭಾತಿಕಂ ಮಾತರಿಶ್ವಂ ॥ ೪೮೯

(ಜಗನ್ನಾಥವಿಜಯಂ, ೧೬-೧೩೬.)

ಕೂಡೆ ಮನೆಮನೆಯೊಳೊಯ್ಯನೆ
ಬಾಡಿದುವೊಡನೊಡನೆ ಮಿಥುನತತಿಯಿರುಳೊಲವಿಂ ।
ಸೂಡಿದ ಪೂಮಾಲೆಗಳುಂ
ಮಾಡದ ಸೊಡರ್ಗುಡಿಗಳುಂ ನಿಶಾನಿರಸನದೊಳ್ ॥ ೪೯೦

(ಚಂದ್ರಪ್ರಭಪುರಾಣಂ, ೮-೯೮.)

ಓರಂತೆ ಮೆಚ್ಚಿದಂ ಕೃತಿ
ಸಾರಂ ಶಶಿವರ್ಣನಕ್ಕೆ ಹೊಯ್ಸಳವಂಶೋ ।
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ॥ ೪೯೧

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ಚಂದ್ರೋದಯವರ್ಣನಂ ಅಷ್ಟಮಾಶ್ವಾಸಂ ಸಂಪೂರ್ಣಂ.



# ಸೂರ್ಯೋದಯವರ್ಣನಂ



ಕುಮುದಂ ಮಿರ್ಗೆ ಚಂದ್ರಮಂ ಚಂದ್ರಿಕೆ ಕಳೆಯಱತಂ ಜ್ಯೋತಿಸಸ್ಯಂ ನಯಂಗುಂ
ದೆ ಮನಂ ಪಂಕೇರುಹಂ ತಣ್ಣಲರವಸರತೂರ್ಯಂ ರಥಾಂಗದ್ವಯಂ ಸಾಂ ।
ಧ್ಯಮಯೂಖಂ ಪೆರ್ಚೆ ಮರ್ಬುಂ ಸುಸಿಲ ಮಱಪು ಪಕ್ಷಿಸ್ವನಂ ಭೈರವೀರಾ
ಗಮುಗುರ್ವಂ ಬೀೞೆ ಪಾಂಥರ್ ನಡೆಯೆ ಕವಿಯಿನಕೋದಯಸ್ತೋತ್ರಮಕ್ಕುಂ॥

ಹಳಹಳನಿರ್ದ ತಾರೆ ಕಳೆಗುಂದಿದ ಚಂದ್ರನಲರ್ಕೆಗುಂದಿದು
ತ್ಪಲ[1]ಮತಿ[1]ಶೈತ್ಯಮಪ್ಪಲರು ನಂದುವ ದೀಪ್ತಿಯಗಲ್ವ ಜಾರೆಯರ್ ।
ಗಱಪುವ ಕೋೞಿ ಶಂಖಮರುಣಚ್ಛವಿ ಕೆಂಪಿನಮಂಡಲಂ ರತ
ಕ್ಕೆಳಸುವ ಕೋಕಮಬ್ಜ[2]ವಿಕಸಂ[2] ಸಲೆ ಸೂರ್ಯನ ವರ್ಣನಕ್ರಮಂ ॥ ೨

ನಿರುಪಮ ಸುಕುಮಾರತೆಯಂ
ಧರಣಿಗೆ ನೆಱೆಯಱಿಪಲುಷ್ಣಕರನ ಕರಂಗಳ್ ।
ಪರೆಯದ ಮುಟ್ಟದ ಮುನ್ನಮೆ
ಮುರುಟಿದುವೆನೆ ಮುಗಿದುವುತ್ಪಲಪ್ರಕರಂಗಳ್ ೩

(ಲೀಲಾವತಿ, ೩-೮.)

ಪೋಳ್[3]ಪಂಚೆ[3]ವೋಯ್ತು ತಾರಗೆ
ಬೆಳಗ[4]ಱತು[4]ದು ಹಿಮಕರಂಗೆ [5]ನಾಡೆ[5] ಚಕೋರಾ ।
ವಳಿ ಬೆಱಗಾದುವು ಕುಮುದಂ
ಗಳ ನಗೆಯಗೆಯೆತ್ತಿ ಪೋಯ್ತು ಮುನ್ನೇಸಱನೊಳ್ ॥ ೪

(ಲೀಲಾವತಿ, ೩-೫.)

ನಿಲ್ಲದೆ ತಮೋಗಜಂ ಕಿಱ
ದಿಲ್ಲದೆ ಬೆಳೆದೊಗೆದ ಪಡುವಣವನೀ ಜನಮಂ ।
ತಲ್ಲಿ ಮರವಾಯೆ ಪಡುಗಡ
ಲಲ್ಲುದಿರ್ದುವು ಬಹಳ ತರಳ ತಾರಾಕುಸುಮಂ * ॥ ೫

---

[1] ವನ (ಗ.ಘ). [2] ದುದಯಂ (ಖ.ಬ). [3] ಪಿಂದೆ (ಖ.ಬ.) ಪಿಂಬು (ಅ).
[4] ಗುಳಿ (ಅ). [5] ಮಾಯ್ದು (ಅ). * ಈ ಪದ್ಯ (ಖ.ಬ). ಪ್ರತಿಗಳಲ್ಲಿಲ್ಲ.

ಒದವಿದ ತಾರಗೆಗಳ್ ನಿ
ಲ್ಲದವೆಲ್ಲಂ ಪರೆದು ಪೋಗೆ ಬೆಳಗಪ್ಪಾಗಳ್ ।
ಚದುರಂಗದ ಬೆಳ್ಗರುವುಡು
ಗಿದ ನೀಲದ ಮಣಿಯ ಮಾಡ್ಕೆಯಾಯ್ತಾಕಾಶಂ ॥ ೭

ಒದವಿದ ಗಗನಾಂಗಣದೊಳ್
ಕೆದಱಿದ ಪೂವಲಿಯ ಕಸವನೇಂ ಕಳೆದರೊ ದಿ ।
ಕ್ಸುದತಿಯರೆಂಬಂದದಿನೊ
ರ್ಮೊದಲೊಳ್ ಮಿರ್ಗ ಪರೆದು ಪೋದುವರುಣೋದಯದೊಳ್ ॥

ಎಸಗಿದುದು ತಣ್ಣೆಲರ್ ನಾ
ಲ್ದೆಸೆ ಪಳಚನೆ ತೊಳಗಿ ಬೆಳಗಿ ತುಱುಗಿದ ತಾರಾ ।
ಪ್ರಸರಮವು ಕಂಚಗಾಱಿ
ಪ್ರಸರಮನುಡುಗಿದವೊಲುಡುಗಿ ಪೋದುವು ನಭದೊಳ್ ॥ ೮

[1]ಲತಿಕಾಲಾಸ್ಯೋ[1]ಪದೇಶವ್ಯಸನಿ ನವಲತಾಂದೋಳಿಕಾಮೋದಸಂತ
ರ್ಪಿತ ಚಂಚಚ್ಚಂಚರೀಕಂ ಕಮಲವನರಜೋರಂಜಿತಾಂಗಂ ಪುಳಿಂದೀ ।
[2]ರತಘರ್ಮ[2]ಸ್ವೇದವಿಚ್ಛೇದನಪಟು ಮೃಗಸಂದೋಹರೋಮಂಥಫೇನೋ
ದ್ಗತಬಿಂದುಸ್ಯಂದಿ ತೀಡಿ[3]ತ್ತೆಸಗಿ ಸುರಭಿ[3]ವೈಭಾತಿಕಂ ಮಾತರಿಶ್ವಂ ॥ ೯

(ಕಾದಂಬರಿ, ಪೂ.ಭಾ ; ೧೪೫.)

ತೀರ್ದುದು ಸುವರ್ಣಮುಡುಪನೊ
ಳಿರ್ದೊಡೆ ಪಡಪಾ[4]ಗ[4]ದೆಂದು ರವಿಯಂ ಕರೆಯ ।
[5]ಲ್ಕಿರ್ದ[5]ಲರ [6]ಧಾರೆ[6]ಯುಟಿದವೊ
ಲಿರ್ದಪ[7]ನುಱೆ ಕಂದಿ ಪಡುವದೆಸೆಯೊ[7]ಳ್ ಚಂದ್ರಂ ॥ ೧೦

(ಅನಂತನಾಥಪುರಾಣಂ, ೮–೭೦.)

ಪೆಱದೆಗೆದು ಚಂದ್ರಿಕಾಜಲ
ಮಱತುದು ಕೆಸಱಂತೆ ತೋಱೆ ಗಗನಚ್ಛವಿ ಬಾಂ ।
ದೊಱೆಯಪರತಟದೊಳೆಳಮೀಂ
ಗುಱುಕುವ ಬಕನಂತಿರಿರ್ದುದಿಂದುವ ಬಿಂಬಂ ॥ ೧೧

(ಲೀಲಾವತಿ, ೭–೯೯.)

---

[1] ರತಿಕಾಲಾನ್ಯಾ (ಖ.ಬ). [2] ರತಿಖೇದ (ಖ.ಬ). [3] ತಂದಗುರ್ವಿಂನೆಗಳ್ದಭಿನವ (ಕ.) [4] ಱ (ಖ.ಬ). [5] ಲ್ಪೋಟ್ಟ (ಅ). [6] ದಾರಿ (ಕ.ಖ.ಬ.ಗ). [7] ನಿದೆ ಕಂದೆ ಪಡುವಗಡೆಯೊ (ಅ).

ಇಡಿದುದ್ದಂ ಬೆಳೆದೇಶ್ಗ್ವೆಟ್ಟದ ಬಿದಿಗರ್ಾಡೆಲ್ಲಮಂ ಬೇಗೆ ನಿ
ಚ್ಚಡರ್ವಂತಿರ್ದುದು ಸಂಜೆಗೆಂಪದಱ ಬಿತ್ತೊಂದೊಂದರಲ್ ತೋರ್ಪಿನಂ ।
[1]ಪಿಡಿದಂತಿರ್ದುವು[1] ನಟ್ಟ ಬಾಂದೊಱೆಯ ಮೀನೆಲ್ಲಂ ಕ[2]ಟಲ್ ತಂದ[2] [3]ಚೆಂ
ಗೊ[3]ಡೆಯಂತಿರ್ದುವು ಪಕ್ಕೆವೆಟ್ಟದೆಡೆಯೊಳ್ ನೀಹಾರರುಙ್ಮಂಡಲಂ ॥ ೧೨

ರಸವೊಸರ್ವ ಜೇನ ಬಱವು
ಟ್ಟಿ ಸುರಿದು ಕವಿದಿಟ್ಟ ಕಂದುವೆಳ್ಳಿಯ ಕೊಡನಾ ।
ಟಿಸಿ ಮುಡಿಗೆ ಸುತ್ತಿ ಬಿನದದೆ
ಬಿಸುಟ್ಟ ಪೂಮಾಲೆಯೆನಿಸಿದುದು ವಿಧುಬಿಂಬಂ ॥* ೧೩

ವಾರುಣಿ ಕಳ್ಳನೀಂಟಿ ಮಱೆದಿಕ್ಕಿದ ಬಟ್ಟಲೊ ಭೀತಿಯಿಂ ನಿಶಾ
ಸ್ವೈರಿಣಿ ಪೋಗೆ ಬಿರ್ದ ಕಿವಿಯೋಲೆಯ ಪತ್ರಮೋ ನಭೋ ।
ವಾರಣಮೊಲ್ಲದೊಕ್ಕ ದಧಿಪಾಂಡುರಪಿಂಡವೊ ಪೇಟೆನಲ್ಕೆ ನೀ
ಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ ॥ ೧೪

(ಲೀಲಾವತಿ, ೩–೩.)

ಪುಡಿಯಡ[4]ರೆ[4] ನಿಮಿ[5]ರ್ದ[5] ಪುತ್ತಿನ
ಕುಡಿ ಕೆಡೆದತ್ತಾಲವೊಲೆದುದದಱಡಿಯೊಳ್ ತೂಂ ।
ಕಡಿ[6]ಸಿ[6] ಮಿಗಂ ಮುಂದಣಿಗೊ
ಗ್ರ್ಡಿಸಿದು[7]ದಾ[7] ಪಡುವ ಪಡುವಮೃಗಲಾಂಛನನಾ ॥ ೧೫

(ಲೀಲಾವತಿ, ೩–೪.)

ಆವರಿಸಿ ನಿಂದ ನಿಜಕಿರ
ಣಾವಳಿಗಳನುಡುಗಿಕೊಂಡು ತೀವಿದ ಕೊಳದೊಳ್ ।
ಕಾವುಡಿದ ಬಿಳಿಯ ತಾವರೆ
ವೂವಾಟ್ದವೊಲಾಟ್ದನಂಬುನಿಧಿಯೊಳ್ ಚಂದ್ರಂ ॥ ೧೬

ತಳರ್ದ ವಿಯೋಗಿನೀ[8]ನಯನ[8]ವಾಃಕಣಸಂಕುಳದಂತೆ ತಾರಕಾ
ವಳಿ ಮಸುಳ್ದತ್ತು ಯಾಮಿನಿಯ ಬೆನ್ನನೆ ಪೋಪ ದುಕೂಲಚೇಲದಂ ।
ಚಳಮೆನೆ ಪೋಯ್ತು ಚಂದ್ರಿಕೆ ನಭೋವಧು ಸೂಡಿ ಬಿಸುಟ್ಟ [9]ಮಾಲ್ಯಮಂ
ಡಳದವೊ[9]ಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ ॥ ೧೭

(ಜಗನ್ನಾಥವಿಜಯಂ, ೧೬–೧೩೫.)

---

[1] ಇಡಿತಂದಿರ್ದುವು (ಕ). ಸಿಡಿತಂದಿರ್ದುವು (ಖ.ಬ). [2] ಟಲ್ವಚ್ಚ (ಗ.ಘ).
[3] ಜೇನೊ (ಕ). * ಈ ಪದ್ಯ (ಖ.ಬ.) ಪ್ರತಿಗಳಲ್ಲಿಲ್ಲ. [4] ರಿ (ಖ.ಬ). [5] ರ್ವ (ಖ.ಬ).
[6] ಪ (ಅ). [7] ದೋ (ಅ). [8] ಹೃದಯ (ಖ.ಬ). [9] ಮಾಲೆಮಂಡಳಿಸಿದೊ (ಖ.ಬ).

ವಾರುಣಿಯನೊಲ್ದು ಮುಟ್ಟಿದ
ಕಾರಣದಿಂ ಮುಟುಗುವಂತೆ ತನ್ನಯ ಕಟೆಯಂ ।
ನೀರೊಳಲೆವಂತೆ ಪಶ್ಚಿಮ
ವಾರಿಧಿಯೊಳ್ ಮಗ್ನನಾದನಂದಮೃತಕರಂ ॥ ೧೮

(ಲೀಲಾವತಿ, ೩-೬.)

ಭುವನಮನಾವಗಂ ಪುದಿದು ತೀವಿದ ತಣ್ಗದಿರ್ಗಳ್ ಪೊದಟ್ದು ಕೈ
ರವವನವಾದುವೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ ।
ದುವು ಸುರಸಿಂಧುವಾದುವು ಸುಧಾರ್ಣವಮಾದುವು ಚಂದ್ರಕಾಂತಮಾ
ದುವು ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುದೇ ॥ ೧೯

(ಲೀಲಾವತಿ, ೩-೭.)

ತಾರಗೆಯ ಕುಮುದವನದ ಚ
ಕೋರಂಗಳ ಕಣ್ಗೆ ಕವಿದ ಕಟ್ತಲೆಯೆನೆ ನೀ ।
ಹಾರಕರನಲಸಿ ಪಟ್ಕೆಗೆ
ಸಾರಲೊಡಂ ಮುಗುಟೆ ಮರ್ಬು ಪರ್ಬಿತ್ತಾಗಳ್ ॥ ೨೦

(ಲೀಲಾವತಿ, ೩-೯.)

ಜಲಜಲಿಸುವ ಬೆಳ್ದಿಂಗಳ್
ತೊಲಗಲೊಡಂ ಮು[1]ಂದು[1]ಗೆಟ್ಟು ಶಶಿಮಂಡಲದೊಳ್ ।
ಮೊಲನೆಡಪೆ ಹರಿಣ[2]ನೆಡೆ[2]ಗಿಡೆ
ಮೊಲಗತ್ತಲೆಯಾಯ್ತು ಯಾಮಿನೀ[3]ನಿ[3]ರಸನದೊಳ್ ॥ ೨೧

(ಅನಂತನಾಥಪುರಾಣಂ, ೮-೭೪.)

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಲಂ
ಬಾಡಿದ ಮಾಧವೀಮಧುರಮಂಜರಿಯಂತಿರೆ ತಾರಕಾಳಿ ನೀ ।
ರೋಡಿ ಕಟಲ್ದು ಬಿಟ್ದು ಕಟಿವೂಗೆಣೆಯಾಗಿರೆ ತಣ್ಣನಪ್ಪೆಲರ್
ತೀಡೆ ತಪೋವನಂಬೊಲತಿ ಪಾವನಮಾಯ್ತು ನಭಂ ಪ್ರಭಾತದೊಳ್ ॥ ೨೨

(ಮಲ್ಲಿನಾಥಪುರಾಣಂ, ೧೦-೧೩.)

ಮಿರ್ಱ ಗಗನಾಗ್ರದೊಳ್ [4]ಪಟೆಯ[4]ಮುತ್ತುವ್ವೋಲೊಂದೆರಡಿರ್ದುವಚ್ಚವೆ
ಳ್ದಿಂಗಳನೀಂಟಿ ಬಿಟ್ಟವು ಬಟಲ್ದ ಚಕೋರಿಗಳಸ್ತಶೈಲದೊಳ್ ।

---

[1] ಟ್ಟು (ಖ.ಬ). [2] ನಡಿ (ಅ). [3] ವಿ (ಅ). [4] ಪೊಳೆಯ (ಗ.ಘ).

ತಿಂಗಳೊಸರ್ತ‌ ಜೇನಬಱುವುಟ್ಟಿವೊಲಿರ್ದುದು [1]ತತ್ಪ್ರಭಾತದೊಳ್[1]
[2]ಕಂಗೊ[2]ಳಿಸಿತ್ತು ಮೂಡದೆಸೆ ಕಾಡೆಳವೆಕ್ಕಿನ ಕಣ್ಣಬಣ್ಣದಿಂ ‖ ೨೩

ಶರನಿಧಿಯಲ್ಲಿ ಸಂಭವಿಸಿದೆಂ ಕಮಲೋದರನೆಮ್ಮ ಭಾವನಿಂ
ದಿರೆಯೊಡವುಟ್ಟಿದಳ್ ಶಿವಲಲಾಟದ ಚಂದ್ರಮನಣ್ಣನೆಂಬುದಂ ।
ಪರಿಕಿಸದಂಧನೊತ್ತಿ ಪಿಡಿದಾಸ್ಯದೆ ಕಚ್ಚಿದನೆಂದು ಶಂಖವಾ
ಧರಣಿಧರಂಗೆ ಪುಯ್ಯಲಿಡುವಂದದಲಿರ್ದುದು ಸುಪ್ರಭಾತದೊಳ್ ‖* ೨೪

ವಾರಿಧಿಗರ್ಭನಂ ಹರಿಕರಾಶ್ರಯನುನ್ನತ ದೇವಪೂಜೆಗಾ
ಕಾರಣನಂ ಕರಂ ಶುಚಿಯನುಜ್ವಲನಂ ದುರಿತೋಪಹಾರಿಯಂ ।
ಕಾರಣಮಿಲ್ಲದೀಯಧಮನೆಂಜಲಮಾಡಿದನೆಂದು ಶಂಖವಾ
ಚಾರಧರಂಗೆ ಪುಯ್ಯಲಿಡುವಂದದೊಲಿರ್ದುದು ಸುಪ್ರಭಾತದೊಳ್ ‖* ೨೫

ತೆಗೆ ತೆಗೆ ಕಾಳಗತ್ತಲೆ ತೆರಳ್ದಿರದೋಡೆಲೆ ಸಂಜೆ ಪೋಗು ಪೋ
ಗಗಿಯದ ತಾರಕಾಳಿಯೆನಿಸುಂ ನಿಲವೇಡೆಲೆ ನಿದ್ರೆ ಬಂದಪಂ ।
ಪಗಲ ಬೊಜಂಗನೆಂದವನಿಗುತ್ಸವದಿಂ ನೆಱೆ ಸಾಱುವಂದದಿಂ
ನೆಗೆದುದು ದೇವವೇಶ್ಮದೊಳೆ ರೋಗಭಯಂಕರ ಶಂಖನಿಸ್ವನಂ ‖* ೨೬

ಮುಟ್ಟುಪಡಾಯ್ತು ಜೊನ್ನದುಣಿಸುಂಬ ಚಕೋರಚಯಕ್ಕೆ ಬಂಧನಂ
ಬಿಟ್ಟುದು ಪದ್ಮಕೋಶವೊಳಕೊಂಬ ಮದಾಳಿಗೆ ಚಕ್ರವಾಕ ನೀಂ ।
ಬಿಟ್ಟಿರಬೇಡ ನಿಮ್ಮನಿಯರೊಳ್ ನೆರೆಯೆಂದುಱೆ ಸಾಱುವಂತೆ ಬೊ
ಬ್ಬಿಟ್ಟು ಕಡಂಗಿ ಕೂಗಿದುದುವಾಗಳು ಕುಕ್ಕುಟನೊಂದು ನಿಚ್ಚಟಂ ‖* ೨೭

ವಾರಿಜಮಿತ್ರನಿಂ ಬಹನೆ ಕೂ ಶಶಿ ನೀಂ ಪೆಱಸಾರು ಸಾರು ಕೂ
ನಾರಿಯರಂಗದೊಳ್ ಪುದಿದ ಜಾರರೆನಿಪ್ಪವರೋಡಿಯೋಡಿ ಕೂ ।
ಕೀರ ಮದಾಳಿ ಕೋಗಿಲೆ ವಿಹಂಗ ಕಳಿಂಗಗಳೇಟಿಯೇಟಿ ಕೂ
ತಾರೆ ತಮಂಧ ಸಾರೆನುತೆ ಕೂಗುತಲಿರ್ದುದು ತಾಮ್ರಚೂಡನುಂ ‖* ೨೮

ಸರಸಿಜಮಿತ್ರ ಕೂ ತಮವಿದಾರಣ ಕೂ ಹಿಮಧೂಮಕೇತು ಕೂ
ನರರ ಜಡಾರಿ ಕೂ ಖಗಮೃಗಂಗಳ ಜೀವನರಕ್ಷಪಾಲ ಕೂ ।
ಪಿರಿದುಮುದಾರದಿಂದೆ ತಿಮಿರಂಗಳ ನುಂಗಿಪ ಜಾರಚೋರರಾ
ಹರಣವಿರೋಧಿ ಕೂ ಎನುತ ಕೂಗುತಲಿರ್ದುದು ತಾಮ್ರಚೂಡನುಂ ‖* ೨೯

---

[1] ಚಂದ್ರಮಂಡಲಂ (ಗ.ಘ). [2] ಸಂಗ (ಕ.ಖ.ಬ).

* ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಪಕ್ಕ ದ್ವಂದ್ವಂಗಳಂ ಝಾಡಿಸಿ ಕೆಲಕೆ ನಿಮಿರ್ದೊತ್ತಿ ಮೂಗಿಂದೆ ಗೋಣಂ
ಹಿಕ್ಕುತ್ತಂ ಬಂದು ಗೇಹಂಗಳನಡರಿ ನಿಶಾದೇವಿ ನೀಂ ಪೋಗು ಪೋಗಂ ।
ದರ್ಕಂ ಪೂರ್ವಾಚಲಕ್ಕೆಯ್ದಿದನೆನುತೆ ಕರಂ ಸಾಱುವಂದಂದದಿಂದಂ
ಕುಕ್ಕೂಕೂ ಎಂಬ ನಾದಂ ನೆಗಟೆ ನಗರದೊಳ್ ಕೂಗಿತಾ ತಾಮ್ರಚೂಡಂ ॥ ೩೦

ಬೆಳಗಾಗಲೆಟ್ಟಿ ಗಟಿಪುವ
ಗಿಳಿಗಳ [1]ಜಱುಚುವ[1] ಪಿಕಂಗಳೆಳಸುವ ಕೋಕಂ ।
ಗಳ ಕಳಕಳದಿನಿಸೊಱಗಿದ
ಕುಳಟೆಯರೆಚ್ಚತ್ತು ಭಯದೆ ತಳವೆಳಗಾದರ್ ॥ ೩೧

(ಲೀಲಾವತಿ, ೩–೧೧.)

ರಸದ ಮಳಯಜದ ಘುಸ್ರಣದ
ಕುಸುಮದ ಕಪ್ಪುರದ ಕವಿವ ಸೊವಡಿಂಗಳಿಗಳ್ ।
ಮುಸುಱೆ ನವನೀಲಪಟಮಂ
ಮುಸುಕಿದವೋಲಸತಿಯೊರ್ವಳಡಿಯಿಡುತಿರ್ದಳ್ ॥ ೩೨

(ಲೀಲಾವತಿ, ೩–೧೨.)

ಉಗುತುಂ ಪೂಮಾಲೆಯಂ ಸೋರ್ಮುಡಿಯಿನೆಡೆಗೆ ಬಿಣ್ಪಿಂಬವೋಲ್ ನೀವಿ
ವಗಿಸುತ್ತುಂ ತೂಕದಿಂದಂ ನಡೆಗೆಡಿಪ ನಿತಂಬಂಗಳಂ ಕಟ್ಟುವಂತ । [ಯಂ ಸಾ
ಕ್ಷಿಗಳಂ ಮುಚ್ಚುತ್ತೆ ನಿದ್ರಾಜಡತೆಯಿನಡಿ[2]ಗೋರೊರ್ಮೆ[2] ಭೂಛಾಯೆಯಂ ನುಂ
ಗುಗುಮೆಂಬಂತಾಗಳಕೋರ್ದಯಭಯವಶದಿಂ ಪಾಱ್ಬಿ [3]ಪೋತಂದಳೊರ್ವಳ್[3] ॥

(ಲೀಲಾವತಿ, ೩–೧೪.)

ಇನಿಯನಲಂಪಿನಿಂ ತೆಗೆದು ಚುಂಬಿಸಿ ತಂಬುಲಮಿಕ್ಕಿ ಸುಯ್ದು ಪೊ
ಯ್ದನುವಿಸಿ ಕೂಡೆ ನೊಂದ [4]ತುಟಿಯಂ[4] ತುದಿನಾಲಗೆಯಿಂದೆ ಪತ್ತಿದಿಂ ।
ಪನೆ ಸವಿವಂತಿರೀಂಟಿ ಕುಚದೊಳ್ ನಸುನಾಂಟಿದ ತನ್ನಖಾಂಕಮಂ
ತನುರುಹದೇಟ್ಗೆಯಿಂದೆಳ[5]ಸಿ[5] ನೋಡುತದೇಂ ಕಿಱುಜೋಡೆ ಪೋದಳೋ ॥ ೩೪

(ಲೀಲಾವತಿ, ೩–೧೬.)

ರಮಣ[6]ರ ಸತಿಯರ[6]ನಿನನ
ಸ್ತಮಿಸಲೊಡಂ ಬಂದು ಪುಗಿಸಿ ಮಗುಟ್ದುಂ ವಿಧುವ ।

---

1 ಗಜಱುವ (ಖ.ಗ.ಬ.) 2 ಗೊರ್ವೊರ್ಮೆ (ಖ). 3 ಯೆಯ್ತಂದಳಾಗಳ್ (ಖ).
4 ಧರಮಂ (ಖ.ಗ.ಬ). 5 ವಿ (ಖ.ಬ). 6 ವಸತಿಗಳ (ಅ).

ಸ್ತಮಿಸೆ ಪೊಱಮಡಿಸಿ ಕಳೆದುದು
ತಿಮಿರಂ ಪಾಣ್ಬೆಯರ ದೂತನಾಗಲೆವೇೞ್ಕುಂ ॥ ೩೫

(ಲೀಲಾವತಿ, ೩–೧೦.)

ನಸು[1]ನೆನೆಮೊ[1]ಯ್ಯನುಳ್ಳಲರೆ ಪೋೞ್ದಲೆ ಕಂದದೆ ಕೂಡೆ ಬಣ್ಣದಿಂ
ರಸವೊಸರ್ವಂತಿರೊಕ್ಕ ನಱುದಂಬುಲಕಂ [2]ಮುಡಿಯಿಂ[2] ಕನಲ್ದು ಬಿ ।
ೞ್ದ ಸೆವಲರ್ಗಂ ಮದಾಳಿ ಮೊರೆ[3]ದೆೞ್ದ[3]ಱಗುತ್ತಿರೆ ಬೀದಿಗಳ್ ಜನ
ಕ್ಕಸತಿಯರೆೞ್ದು ಪೋದುದನೆ ಪೇೞ್ವವೊಲಿರ್ದುವು ಸುಪ್ರಭಾತದೊಳ್ ॥ ೩೬

(ಲೀಲಾವತಿ, ೩–೧೭.)

ಉಗುೞ್ದುವು ಪೀರ್ದ ಕೞ್ತಲೆಯನಟ್ಟಿಸಲಾಱದೆ ಕಾಱುವಂತೆ ಕಾ
ಡಿಗೆಗಳನಾಗಳೋಪವರ ಕೇ[4]ಳಿ[4]ಗಳಂ ಕೊರಲೆತ್ತಿ ನೋಡುವಂ ।
ತೊಗೆದುವು ನೋಡಿ ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್
ತೆಗೆದುಡಗಿರ್ದುವೊಳ್ಗುಡಿಗಳಂ [5]ರತ[5]ದೀಪಿಕೆಗಳ್ ನಿಶಾಂತದೊಳ್ ॥ ೩೭

(ಲೀಲಾವತಿ, ೩–೧೮.)

ಕಡುನಲ್ಲಂ ನೆರೆ[6]ದಿರ್ಪನೆ[6]ಣ್ಣೆ ಸವೆದತ್ತಿಲ್ಲಿನ್ನುಮೋವೆತ್ತ ಸೋ
ರ್ಮುಡಿಯಿಂ [7]ಬಿ[7]ೞ್ದುದು ಪುಷ್ಪಮಾಲೆಯೆನುತುಂ ಮುಗ್ಧಾಕ್ಷಿ ಚಿಂ[8]ತಾತು[8]ರ ।
ಕ್ಕಡೆಯಾಗಿರ್ಪಿನಮೆೞ್ದಱಂಕೆಯುಲರಿಂದು[9]ದ್ಬುದ್ಧ[9] ಪಾರಾವತಂ
ಸೊಡರಂ [10]ಬೀಸಿದುದೆಯ್ದೆ ಕೇಳಲೆನಸುಂ[10] ತಾನಟ್ಟಿವಟ್ಟಂದದಿಂ ॥ ೩೮

(ಲೀಲಾವತಿ, ೩–೧೯.)

ಬೆಳಗಪ್ಪ ಜಾವದೈಕಿ
ಲ್ಗೊಳೆ ಶೀತಕ್ಕಾಱದಳ್ಕಿ ತೊಟ್ಟಿರ್ದ ಧರಾ ।
ತಳಮೆಂಬ ಪೆಣ್ಣ ಪೊಸಕಂ
ಚುಳಿಕೆಯ ಪೊಸಮುತ್ತನಂತಿರಾದುವು ಪನಿವುಲ್ ॥ ೩೯

ಯೋಗಿಜನಕ್ಕೆ ತತ್ವಗತಿಸಂಸ್ಥಿತಿಯುಂ ಕಳೆಯೊಳ್ ಕಳಾವಿದ
ರ್ಗಂ ಗುರುವೇಧೆಯುಂ ಕವಿಜನಕ್ಕೆ ಕವಿತ್ವದ ಸಾರಮುಂ ಬಹೂ ।
ದ್ಯೋಗಿ ಜನಕ್ಕೆ ತದ್ವಿಷಯಸಿದ್ಧಿಗಳುಂ ನೃಪರ್ಗನ್ಯರಾಜರಾ
ಜ್ಯಾಗಮವೃ[11]ದ್ಧಿ[11]ಯುಂ ಮನಕೆ ಪೆರ್ಚುವುದೊಪ್ಪುವ ಸುಪ್ರಭಾತದೊಳ್ ॥ ೪೦

---

[1] ನನೆಯು (ಕ.ಖ.ಬ). [2] ಕುರುಳಿಂ (ಅ). [3] ದೆರ್ದ (ಅ). [4] ರಿ (ಅ). [5] ತರ (ಖ.ಬ). [6] ದಪ್ಪೊಡೆ (ಅ). [7] ಸೋ (ಅ). [8] ತಾಂತ (ಅ.) [9] ದ್ಭೂತ (ಕ.ಖ.ಬ). [10] ಪೊಯ್ದುದು ಕೇಳಲಾಕಯಳಸಂ (ಅ). [11] ತ್ತಿ (ಖ.)

ಮುಂದೆ ಮಹಾಸುರಮಥನಂ
ಬಂದೇಱಿದನಮರಗಿರಿಶಿಖಾಗ್ರಮನೆಂದೋ ।
ರಂದದೆ ಮೊರೆವಳಿಯಿಂದರ
ವಿಂದೌಘದ ಮುಂದೆ ನಿದ್ದೆ ತಿಳಿದುವು ಕೊಳಗಳ್ ॥ ೪೧

ಹರಗಿರಿಯಂ ಪರಿದೇಱುವ
ಹರಿಪಾದಕ್ಕಮಮ ಸರಸಿ ಪರಪಿದ ನೀಲಂ ।
ಬೆರಸಿದ ಪೀತಾಂಬರಮೆನೆ
ಬಿರಿದಲರ್ದುವು ತುಂಬಿವೆರಸಿ ಪೊಂದಾವರೆಗಳ್ ॥ ೪೨

ಕೆಂಗದಿರನ ಕರಕಿಸಲಯ
ಸಂಗದಿನಾರಕ್ತಮಾದ ಕೆಂದಾವರೆಗಳ್ ।
ಸಂಗಡಿಸಿಯಲರ್ದವಂಗಜ
ನಿಂಗಳಮಂ ವಿರಹಿಗಳ್ಗೆ ನಲಿಗೆದಱಿದವೋಲ್ ॥ ೪೩

ಹರೆಯದ ಕಟ್ಟಿಲೆ ಪೋ ಪಲ್
ಮೊರೆದಪುವುಟಿದಿರ್ದ ಜೊನ್ನವಱಿಗಳ್ಗೆಂಬಂ ।
ತಿರೆ ಧವಳ ಜಲಜವಲರ್ದುವು
ಪರಿಹರಿಪಂತವಱ ಪುಟ್ಟುತನಕಲಗೊರ್ಳದೊಳ್ (?) ॥ ೪೪

ನಡು ನಸುಪೊಂಗಿ ಸುತ್ತಱಿಯೆ ಪೊತ್ತಿದೆಸಟ್ಮೊನೆವೆರ್ಚೆ ತಣ್ಣೆಲ
ರ್ಗೆಡೆದೆಱಿಪಾಗೆ ಪೊಕ್ಕು ಸುಟಿಯುತ್ತಿರೆ ತಳ್ಪು ಸಡಿಲ್ದಗಲ್ದರಲ್ ।
ಪಿಡಿದುಡುಗಿರ್ದ ಕೇಸರದ ನುಣ್ಗೊನೆ ಸೂ[1][ನ][1] ಮರಲ್ದು ಚೆಲ್ವಿನೊಳ್
ಗಡಣಿಸಿದತ್ತು ಮುಂಬಗಲೊಳಂಬುರುಹಂ ಸರಸೀಸಮೂಹದೊಳ್ ॥ ೪೫

ಜಗಮಂ ಬೆಳಗುವ ಮಗನಂ
ಗಗನಂ ಪಡೆದೊಸಗೆಗಂದು ವಾ[[2]ರಿ[2]]ನೃಪಂ ತೊ।
ಟ್ಟಗೆ ಬಿಟ್ಟ ತಮದ ಸೆಱೆಯೆನ
ಲೊಗೆದುವು ಮುಂ ಸಿಲ್ಕಿದಳಿಗಳಲರ್ದಂಬುಜದಿಂ ॥ ೪೬

ಇನನ ವಧೂಟಿಯರೆಂಬೀ
ಮುನಿಸಿಂದಿರದೆಯ್ದೆ ಮುತ್ತಿ ಗಳಗರ್ಜನೆಗೆ ।

---

[1] ನೆ (ಕ), ನು (ಖ.ಬ). [2] ರೆ (ಕ), ಲೆ (ಖ.ಬ.)

ಯ್ವನುಪಮ ತಮೋ ಭಟಾರ್ತವಿ
ವೆನೆ ಜಿನಗುತ್ತಿದ್ರುವಳಿಗಳಬ್ಜಾಕರದೊಳ್ ‖ ೪೭
(ಕುಸುಮಾವಳಿ, ೧-೪೮.)

ತನಿ[1]ವಂಡಂ ತೊ[1]ರೆವಿಟ್ಟು ಕುತ್ತೆಸಟ್ಟಿಳೊತ್ತಿಂದೋಡಿ ನಿಂದೂಡುವ
ಬ್ಜಿನಿಯೊಳ್ ಗೋಸಗೆಯುಂಡು ಪಾಡುವಳಿಯಿಂ ಚಂಡಾಳಬಾಳಾಕಳ ।
ಧ್ವನಿಯೊಳ್ ಮಂದ್ರತೆಯಂ ತಗುಳ್ಚಿ ಕಿವಿಪೊಕ್ಕ[2]ಶಂಗವೇಂ[2] [3]ಸೌಖಶಾ
ಯನಿಕಂ[3] ತಾನೆನಿಸಿತ್ತೊ ಸೆಜ್ಜೆವನೆಯೊಳ್ [4]ಪ್ರಾಭಾತಶೀ[4]ತಾನಿಲಂ ‖ ೪೮
(ಅನಂತನಾಥಪುರಾಣಂ, ೮-೭೯.)

ಅಟ್ಟಳೆಯಂ ಪಳಂ[5]ಚಲೆದು[5] ಗೋಪುರಮಂ ಪರಿದೇಱಿ ಕೋಂಟೆಯಂ
ಮೆಟ್ಟಿ ಸುಧಾ[6]ಶ್ರಮಾ[6]ವಳಿಗೆ ಲಂಘಿಸಿ ಹರ್ಮ್ಯತಳಕ್ಕೆ ಪಾಯ್ದು ಚೌ ।
ವಟ್ಟದೊಳೆಯ್ದಿ ದೇವಕುಲ[7]ದಾ[7]ದಲೆಯಿಂ ಗಗನೋ[8]ದ[8]ರಕ್ಕೆ ಧೀಂ
ಕಿಟ್ಟಿದು ದುಂದುಭಿಸ್ವನಮನೇಳಿಸಿ ಭೋಂಕನೆ ಶಂಖನಿಸ್ವನಂ ‖ ೪೯
(ರಾಮಚಂದ್ರಚರಿತಪುರಾಣಂ, ೫-೧೦೭.)

ಪಾಡಟಿದಂತರಂಗವಿರಹವ್ಯಥೆ[9]ಯಿಂ[9] ಬೞತೋಡುವಂತೆ ಬಾ
ಯ್ಗೂಡಿ ಪೊದಟ್ದ ಕಂಬನಿಯ ಮುಂಬ[10]ನಿಯಿಂಬಿನೊಳಂ[10] ಮಱುಂಗಿ ತೇಂ ।
ಕಾಡಿ ಕೊರಲ್ ಪೊಣರ್ಚ ಪುಳಕಂ ನೆಗೆತಪ್ಪಿನ ಹಮ್ಮದಂಗಳಿಂ
ಕೂಡುವ [11]ನಲ್ಲಳಟ್ಟೆಯಱಿದೊಂದಿನಿಸಿರ್ದುವು[11] ಜಕ್ಕವಕ್ಕಿಗಳ್ ‖ ೫೦
(ಅನಂತನಾಥಪುರಾಣಂ, ೮-೭೮.)

ಎಱಕೆ ನೆಱಿಲ್ದಿರೆ ಕೊರಲೊಡ
ನೊಱಗಿರೆ ಮದನಾಂಬು ಸುರಿಯೆ ಕಂಗಳ್ ಸುಖದಿಂ ।
ಕಱುಕಿಱುದೆಱೆದಿರೆ ಸುರತದ
ಮ[12]ಱುಕಂ[12] ಪೊಸತಾಯ್ತು ಜಕ್ಕವಕ್ಕಿಯ ಪೊಣರೊಳ್ ‖ ೫೧

ಬರಲಿದಿರ್ವಂದು ಮೈಗಳೆರಡಿಲ್ಲದೆ ಪಕ್ಕದಿನಪ್ಪಿ ಕಂಗಳಿಂ
ಸುರಿಯೆ ಮುದಶ್ರು ಮುಂದಲೆಯ ತುಪ್ಪುಟನೊಯ್ಯನೆ ಕಚ್ಚಿ ಚಂಚುವಿಂ ।

---

[1] ವಣ್ಣಂ ಪೊ (ಅ.) [2] ಸಂಗದಿಂ (ಅ.) [3] ಸೌಖ್ಯಸಾಯನಿಕಂ (ಅ), ಸೌಖ್ಯ ತಾನೆನಿಸಂ (ಕ), ಸೌಖ್ಯಸಾನಿನಿಕಂ (ಖ.ಬ). [4] ಸುಪ್ರಾತಗೀ (ಅ), ಸುಪ್ರಾತಶೀ (ಕ). [5] ಚಿಪುರ (ಅ). [6] ಗೃಹಾ (ಅ). [7] ಕಾ (ಕ). [8] ತ್ಕ (ಕ.ಖ.ಬ). [9] ಯಂ (ಅ). [10] ದದಿಂ ಪೊನಲೊಳ್ (ಅ). [11] ಗಗ್ಗರಿಕ್ಕೆ ಮೆಱೆದೊಂದಿ ನಿಮಿರ್ದುವು (ಅ). [12] ಱಿತಂ (ಕ).

ಸರಸಮೃಣಾಳನಾಳದ ಕುಸುಂಕುಱನತ್ತೆಳವೊಯ್ದು ಕಾಂತನೊಳ್
ನೆರೆದು ರಥಾಂಗ ಕಾಂತೆಯೆರ್ದೆಯಾಱಿದುದಾದಮೆಗಂ ಪ್ರಭಾತದೊಳ್ ॥ ೫೨

ಎತ್ತಣಿನಕ್ಕೆ ಬಂದು ದನಿದೋಱೆ ಸಮುತ್ಸುಕಲೋಲಲೋಚನಂ
ಪತ್ತೆ ಸಮಂತು ತಳ್ತೆಱಗಿ ಪಕ್ಕದಿನೊರ್ವರ್ದಲಪ್ಪೆ ಚಂಚುವಿಂ ।
ನೆತ್ತಿಯ ತುಪ್ಪಟಂ ಕರ್ದುಕಿ ಮೆಯ್ಯೆಡೆ ಕೂಡಿ ಸಮಾನ ಹರ್ಷದಿಂ
ದುತ್ತರಮಪ್ಪಿನಂ ಕೊಳಡೊಳಿರ್ದುವು ಸಂಧಿಸಿ ಜಕ್ಕವಕ್ಕಿಗಳ್ ॥ ೫೩

ಪರೆಯೆ ಕುರುಳ್ಗಳಂತೆ ತಿಮಿರಂ ಮುಗಿಯುತ್ತಿರೆ ನೆಯ್ದಿಲ[1]ಕ್ಷಿ[1]ಯಂ
ತಿರೆ ಬೆಮರಂತಿರಾಱುತಿರೆ ತಾರಗೆ ತೀರೆ ವಿಭಾತಕಾಂತನೊಳ್ ।
ನೆರೆದು ಸುಖಾಂತ್ಯದೊಳ್ ಕರಗುತಿರ್ಪ ಮನೋಹರಿಯಾರ್ದ್ರಕುಂಕುಮಾಂ
ಬರಮೆ [2]ಜಗುಟ್ಟಿ[2]ವೊಲ್ ಬೆಳತುದ್ಯೆಂದ್ರಿಯ ಸಾಂಧ್ಯಮಯೂಖಪಲ್ಲವಂ ॥ ೫೪
(ಲೀಲಾವತಿ, ೩–೮೦.)

ಇನನ ಬರವಿಂಗೆ ಪೂರ್ವಾಂ
ಗನೆ ಕುಂಕುಮಪಂಕದಿಂದಲಂಕರಿಸಿದಳೋ ।
ತನುವನೆನೆ ಸಂಜೆ ರಂಜಿಸಿ
ತಿನನುದಯಮನಱಿಪುವಂತೆ ಮೂಡಣ ದೆಸೆಯೊಳ್ ॥ ೫೫

ಕಮಲಿನಿಗಂ ಕೋಕದ್ವಯ
ಸಮುದಯಕಂ ಕೆಟ್ಟರಳಿದರೆಂದಿನನೆ ಪಸಾ ।
ಯಮನಟ್ಟಿದಂತೆ ಮೆಱೆದುದು
ನಿಮಿರ್ದರುಣೋದಯದೊಳೆಸೆವ ಸಂಧ್ಯಾರಾಗಂ ॥ ೫೬
(ಅನಂತನಾಥಪುರಾಣಂ, ೮–೬೫.)

ಪಡುವಲ್ ಚಂದ್ರನ [3]ಬೆ[3]ಳ್ವೆಳ
ಗೊಡರಿಸುವರುಣೋದಯಾಂಶು ಮೂಡಲ್ ಕೈಕೊಂ ।
ಡೆಡೆಯಣ ತಮವೊಪ್ಪಿದುದಿರು
ಳುಡುಗಿದ ಕಟ್ಟಿಲೆಯ [4]ಬಟಿಯ ಮಱಿಗಳಿವೆನಿಸಲ್[4] ॥ ೫೭
(ಅನಂತನಾಥಪುರಾಣಂ, ೮–೬೩.)

ವಾಯಸಕೋಟಿಯೂರ ಬನದಿಂ ಪಥಿಕರ್ ಸಲೆ ಕೇಳುವಂತೆ ಕಾ
ಕಾಯೆನುತೂರನೆಯ್ದಿದುವು ಗೂಗೆಗಳೋಡಿ ಘು ಘುಮ್ಮೆನುತ್ತೆ ನೀ ।

---

[1] ಚ್ಚಿ (ಅ). [2] ಬಳಲ್ದ (ಅ). [3] ಕೊ (ಕ.ಖ.ಬ). [4] ಬೆಳೆಯಮಱಿಯೊಗುವೆಳೆಯೊಳ್ (ಕ.ಖ.ಗ.ಬ).

ಡಾಯುಮವ್ರೋದುದೀ ಜಗಮುಮೆಲ್ಲಿಯುಮಿಲ್ಲೆನೆ ನುಂಗಿ ನೀಲಶೈ
ಲಾಯತಮಾದ ಕತ್ತಲೆಯಡಂಗಿದುದೇಸ್ಗೆಯ ಸುಪ್ರಭಾತದೊಳ್ ॥ ೫೮

ತೆಱೆದುವು ಗೋಪುರಪ್ರತತಿ ಸೆಜ್ಜರದಿಂ ಗಜರಾಜಿಯುತ್ಸವೆ
ಬ್ದುಱೆ ದನಿದೋಱೆದೌ ಬಿಡದೆ ನೇಲ್ದುದು ಜಾಯಿಲನುಕ್ಕಡಕ್ಕೆ ಪೊ ।
ಕ್ಕಱುವುಲಿ ಕಾಣಿಸಲ್ಕಣದೆ ಸಂಚರಮಾದುದು ರಾಜಗೇಹದಿಂ
ಪೊಱಮಡುತಿರ್ದುದುದ್ಧತವಿಳಾಸದೆ ಪಾಳಿಯದಂಗನಾಜನಂ (?) ॥ ೫೯

ತೊಡೆ ತೊಡೆಯೊಳ್ ಮರಳ್ದು ನಿಲೆ ಪೇರುರಮುಂ ಮೊಲೆಯುಂ ಮರಲ್ದೊಡಱ
ಲ್ದಡಸಿರೆ ಮಧ್ಯಭಾಗಯುಗಳಂ ನಳಿತಂದು ತಗುಳ್ದು ಪತ್ತಿ ಚೆ ।
ಲ್ವಡೆದಿರೆ ಕಂದದೊಳ್ ಭುಜಲತಾವಳಿ ತಳ್ತಿರೆ ಬಾಯೊಳಗೊಂದಿ ಬಾಯ್
ತೊಡರ್ದಿರೆ ಕೂಡೆ ನಿದ್ದೆ ತಿಳಿದರ್ದುವು ನಲ್ಲರ್ಪೊಣರ್ ನಿಶಾಂತ್ಯದೊಳ್ ॥ ೬೦

ಅಳಿದ ಕುರುಳ್ ತಡಂಮುಡಿದ ಸೋರ್ಮುಡಿ ಬೀಗಿ ಬೆಳರ್ತ ದೋರೆವಾಯ್
ಮಳಮಳಿಸುತ್ತಮಿರ್ಪ ನಗೆಗಣ್ ನಸುಜೋಲ್ದುಡೆ ಕೊಂಕಿದೋಲೆ ಚ ।
ಪ್ಪಲರ್ದ ಘನಸ್ತನಂ ನವನಖಾಂಕಮಲಂಕರಿಸಲ್ ನಿಜೇಚ್ಛೆಯಿಂ
ಸುಳಿವಬಲಾಜನಂ ದಿನಕರೋದಯಕಾಲದೊಳೊಪ್ಪಿ ತೋಱುಗುಂ ॥ ೬೧

ಊದಿದುದು ತಣ್ಣೆಲರ್ಗಳಳಿ
ನಾದಂ ಗಾಂಧರದೊಳೊಂದಿ ನೆಗೞ್ದುದು ಪದ್ಮಾ ।
ಮೋದಮಿನಿಸಿಂ ತೊವರ್ತೊವ
ರಾದುವು ಕೂಗಿದುವು ತಾಮ್ರಚೂಡಚಯಂಗಳ್ ॥ ೬೨

ಪರೆದುದು ಮುಬ್ಬು ಪರ್ಬಿದುದು ಕೆಂಬೆಳಗಿಂದ್ರದಿಶಾವಿಭಾಗಮಂ
ಸುರಭಿ ಸಮೀರನೂದಿದುದೆಸಱ್ಮಿಸುಕಲ್ ತೊಡಕಿತ್ತು ಪಂಕಜಂ ।
ಸರಮಟಿದೊಂದನೊಂದೆಳಸುತಿರ್ದುವು ಕೋಕಮುಲೂಕಸಂಕುಳಂ
ಚರಿಯಿಸಿ ಬಂದಡಂಗಿದುವು ಪಕ್ಕಿಗಳೆದ್ದುವು ಸುಪ್ರಭಾತದೊಳ್ ॥ ೬೩

ಕಱೆದುವು ಪಸಿ[1]ಪುಲ್ಲೊಳ್[1] ಕಂ
ದೆಱೆದುವು [2]ನವಿಲೆರ್ದುಕರಿಣಿಕರ್ಣಂಗಳನೆ[2] ।
ಚ್ಚಱಿಸಿದುವಂಗುಳಿಯಿಂ ಬಾಯ್
ದೆಱೆದುವು ಸಿಂಗಂಗಳಲ್ಲಿ ಮುನ್ನೇಸಱಿನೊಳ್ ॥ ೬೪
(ಕಾದಂಬರಿ, ಪೂ.ಭಾ., ೧೪೨.)

---

[1] ಪುಲ್ಗಳ (ಅ), ವುಲ್ಗಳ್ (ಕ), ಪುಲ್ಲಿಗೆ (ಖ.ಬ). [2] ಪುಲಿಗಳ್ ನವಿಲ್ಗಳುಂ ಕರಿಗಳನೆ (ಕ.ಖ.ಬ).

ಧೃತನಿದ್ರಾಲಸ್ಯಭಾರಂ ತೊಲಗೆ ಬಿದಿರ್ದಲರ್ ಪಂಕಮಂ ಕೂಡೆ ತೀನೆ
ರ್ದ ತನುಸ್ಥಾನಂಗಳಂ ಕೊಂಕಿನೊಳಡಿಗಡಿಗಂದಂಟಿ ಸೋಂಕೆತ್ತಿ ಕೂಗಿ
ತ್ತತಿರಾಗಂ ಕುಕ್ಕುಟಂ ಕುಂಟಣಿಯರ ಬೆಸದಿಂದೊತ್ತೆಗೊಂಡನ್ಯಕಾಂತಾ
ರತಿರಾಗಶ್ರಾಂತೆಯರ್ಗಂದುದಯದೊಸಗೆಯಂ ಸಾಱುವೊಂದಂದದಿಂದಂ ॥ ೬೫

ಒದವಿದ ನಿದ್ರೆ ಪಿಂಗೆ ಕುಸಿದೊಯ್ಯನೆಡಂಗಿದ ಗೋಣನೆತ್ತಿ ನೀ
ರದಪಥದತ್ತಲೊರ್ಗುಡಿಸಿ ನೋ[1]ಡಿ ಶಿರೋಧರ[1]ಕೇಸರಂಗಳಂ ।
ಬಿದಿರ್ದು ತಟಂತಟೆಂದೆಱಕೆಗುಟ್ಟಿ ತಗುಳ್ದೊಡನೊತ್ತಿ ಕೋೞಿ ಕೂ
ಗಿದುದಮರ್ದಪ್ಪಿದೋಪರೆರ್ದೆ ಪವ್ವನೆ ಪಾಱೆ ನಿಶಾವಸಾನದೊಳ್ ॥ ೬೬

ಕಲಸಿದ ಕೂೞ ತಂಬುಲದಲಕ್ಕಿಯ ಮೊಟ್ಟೆಯ ಮೊಟ್ಟೆ ಬೆನ್ನೊಳ
ಗ್ಗಲಿಸಿರೆ ಕಯ್ಯ ಕೈದು ಪಸುರ್ವಟ್ಟೆಸೆವಕ್ಷತೆ ತೊಟ್ಟ ಕೆರ್ಪುಗಳ್ ।
ಬಲದ ಹಸುಂಬೆ ನಾಂದೆ ವಳಯಕ್ಕಧಿದೇವತೆ[2]ಕೂರ್ಗೆ[2] ಬಂಧುಗಳ್
ನೆಲಸುಗೆನುತ್ತೆ ಮೇಲ್ ಪರಸಿದರ್ ಪಥಿಕರ್ ನಡೆದರ್ ಪ್ರಭಾತದೊಳ್ (?)॥ ೬೭

ಅರೆರಥ ಹೊನ್ನಗಾ[3]ಲಿ[3] ನಸು ಪಿಂಜ[4]ಳು[4]ಕುತ್ತಿರೆ ರನ್ನದೀಸು ಮೇ
ಲ್ಮರಲೆ ರಥಾಗ್ರದೊಳ್ ಪದುಳಮಿರ್ದರುಣಂ ನಸುಬಿಟ್ಟು ನೇಣನ ।
ಚ್ಚರರೆಯೆನುತ್ತುಮಾ[5]ಲಿ[5] ನಭಮಂ ತುಡುಕುತ್ತಿರಲಾ ಹರಿವ್ರಜಂ
ಹರಿದಡರ್ದೇಱೆ ಬಂದುದಯಶೈಲಮನೇಱಿದನಬ್ಜಿನೀಪ್ರಿಯಂ ॥ ೬೮

ಒಳವು ಮಣಿನಿಕರಮುದಯಾ
ಚಳದೊಳ್ ಗಡಮೆಂದು ಬಂದು ನಿಂದಳ್ಗಿಂದ್ರಂ ।
ಕುಳಿಶದೊಳೆ ಮೀಂಟಿ ಮುಗುಟ್ದು
ಚ್ಚಳಿಸಿದ ಮಾಣಿಕಮನರುಣಕಿರಣಂ ಪೋಲ್ತಂ ॥ ೬೯

ತಡೆಯದೆ ತಮಮೆಲ್ಲಮನೊಂ
ದೆಡೆಯೊ[6]ಳ್[6] ತಂದೊಟ್ಟಿ ಪೂರ್ವದೆಸೆಯೊ[7]ಳ್[7] ಧಾತ್ರಂ ।
ಸುಡಸುಡಲುರಿವೆರಸಿದ ಬ
ಲ್ಗಿಡಿಯಂ ಪೋಲ್ತೆಸೆದನರುಣಕಿರಣಸಹಸ್ರಂ ॥ ೭೦

ಜಲಧಿಚಳೋರ್ಮಿಚಾಮರಚಯಂಗೆ ದಿಶಾಧಿಪದಿಗ್ಗಜೇಂದ್ರಸಂ
ಕುಳಪರಿವಾರ[8]ಭೋ[8]ಗಿಗೆ ನಭೋಮಣಿಮಂಟಪಮಂಡನಂಗೆ ಕ ।

---

[1] ಡುತನೆತ್ತಿಯ (ಗ.ಫ). [2] ದೂರ್ಕೆ (ಖ.ಬ). [3] ಡಿ (ಕ). [4] ಳಿ (ಕ).
[5] ರಿ (ಖ.ಬ). [6] ಳೆ (ಕ). [7] ಳೆ (ಖ.ಬ). [8] ಭಾ (ಅ).

ಣ್ಗೊಳಿಸೆ ಜಗನ್ಮಹಾಪ್ರಭುಗಭೀಕ್ಷಿಸಲೆತ್ತಿದ ಸುಪ್ರಭಾತಮಂ
ಗಳ ಮಣಿದರ್ಪಣಕ್ಕೆ ದೊರೆಯಾಯ್ತುದಯಾದ್ರಿಯೊಳರ್ಕಮಂಡಲಂ ॥ ೭೧
(ಲೀಲಾವತಿ, ೩-೮೨.)

ಸುರದಿಕ್ಕಾಮಿನಿ ಪೊಯ್ಯೆ ಮೇಗೊಗೆದ ಶೋಣಂ ಕಂದುಕಂ ತಾನಿದೆಂ
ಬರ ಮಾತಿ[1]ರ್ಕೆಮ[1] ಮೀಂಗಳೆಂಬಲರ್ಗಳಂ ಕೊಯ್ಯಲ್ಕೆ ತತ್ಕಾಂತೆ ಬಿ।
ತ್ತರದಿಂದೆತ್ತಿದ ಕೆಂದಳಂ ದಲೆನೆ ಕಣ್ಗಾದಂ ಬೆಡಂಗಾದನಂ
ಬರಲಕ್ಷ್ಮೀವೃತಚಂದ್ರಿಕಾ[2]ಧವ[2]ಳವಾಸಸ್ತಸ್ಕರಂ ಭಾಸ್ಕರಂ ॥ ೭೨
(ಚಂದ್ರಪ್ರಭಪುರಾಣಂ, ೮-೧೪೦.)

ಮುರರಿಪು ಪಾರಿಜಾತಕುಜಮಂ ಕೊಳೆ ಬಿಲ್ವಿಡಿದಂದು ಸೋಲ್ತನಿಂ
ಪರಿಣತನಪ್ಪೆನದ್ದಣದೊಳೆಂದೊಸೆದರ್ಚಿಸಿ ಮೂಡವೆಟ್ಟದೊ।
ಳ್ಗರುಡಿಯೊಳಿಂದ್ರನಾಂತ ಪೊಸಮಾಣಿಕದಡ್ಡಣಮಿಂತಿದೆಂಬಿನಂ
ಕರಮೆಸೆದಿತ್ತು ಶೋಣರುಚಿಯಿಂದುದಯಾದ್ರಿಯೊಳರ್ಕಮಂಡಲಂ ॥ ೭೩
(ಜಗನ್ನಾಥವಿಜಯಂ, ೧೬-೧೩೯)

ಸ್ಮರಪರಿತಾಪದಿಂ ಮಱುಗಿ ಕೋಟಲೆಗೊಂಡೆರ್ದೆಯಾಱಿ ಸುತ್ತಲುಂ
ಪರಿಪರಿದಾತ್ಮವಲ್ಲಭೆಯನೀಕ್ಷಿಸಿ ಕಾಣದೆ ಜಕ್ಕವಕ್ಕಿಗಳ್।
ಸರಸಮೃಣಾಳಮಂ ಶಿಖಿಗೆ ತೋಱಿದವೋಲ್ ಕರಗುತ್ತಮಿರ್ಪುದುಂ
ಕರುಣಿಸಿದಂತೆ ಬಂದುದಯಶೈಲಮನೇಱಿದನಂಬುಜಪ್ರಿಯಂ ॥ ೭೪

ನಿಶಿ ಬಿಟ್ಟೋಡೆ ಶಶಾಂಕನುನ್ನತಕರಂಗಳ್ ಬಾಡೆ ಕಂಜಾಳಿ ಸಂ
ತಸಮಂ ಸೂಡೆ ಮರಾಳಿ ಪಾಡೆಯೊಲವಿಂ ಚಕ್ರದ್ವಯಂ ಕೂಡೆ ಶೈ।
ತ್ಯಸಮೀರಂ ನೆಱೆ ತೀಡೆ ಕೈರವನಿಕಾಯಂ ಬಾಡೆ ಪೂರ್ವಾದ್ರಿ [3]ಕೆಂ
ಬಿಸಿಲಿಂದೊಪ್ಪಿರೆ ಮೂಡಿದಂ[3] ಭಗಣಶೋಭಾತಸ್ಕರಂ ಭಾಸ್ಕರಂ ॥ * ೭೫

ನಗೆಯಂ ಪಂಕಜವಕ್ತ್ರದೊಳ್ ದುಗುಡಮಂ ನೈದಿಲ್ಗಳೊಳ್ ಲಲ್ಲೆಯ
ಪ್ಪುಗೆಯಂ ಕೋಕಯುಗಂಗಳೊಳ್ ಪದಪಿನಿಂ ಕಣ್ಬೇನೆಯಂ ಗೂಗೆಯೊಳ್।
ಸೊಗಸಂ ದಿಕ್ತತಿಯೊಳ್ ಪೊದಟ್ಟಿ ಜಯಮಂ ರಾಜಾಂಗನಾನೀಕದೊಳ್
ಮಿಗೆ ಮೂಡುತ್ತುದಯಾದ್ರಿಯೊಳ್ ನೆಲಸಿದಂ ಪಂಕೇಜಿನೀವಲ್ಲಭಂ ॥ * ೭೬

ಎಳದಳಿರಂತೆ ಪೆರ್ಮರದ ಕೊಂಬುಗಳೊಳ್ ನವಧಾತುನಿರ್ಝರಂ
ಗಳ ಪೊನಲಂತೆ ಶೈಲಶಿಖರಂಗಳೊಳುಜ್ವಲಮಪ್ಪ ಮಾಣಿಕಂ।

---

[1] ರ್ಕದು (ಕ.ಖ.ಬ). [2] ವಿಮ (ಕ.ಖ.ಬ). [3] ಯಾಗಸಮಂ ಬಂದಿರದೇಱಿದಂ (ಖ.ಬ). * ಈ ಎರಡು ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಗಳ ರುಚಿ ಪರ್ವಿದಂತೆ ಸುರ[1]ಗೇಹ[1]ಕನತ್ಕಳಶಂಗಳೊಳ್ ತಳ
ತ್ತಳಿಸಿದುದೀಷದುನ್ಮಿಷಿತಮಂಡಳಚಂಡಕರಾಂಶುಜಾಳಕಂ ॥ ೭೭

(ಲೀಲಾವತಿ, ೩–೮೧.)

ಒಸಗೆಯನಂಬುಜಪ್ರತತಿಗುಬ್ಬಸಮಂ ಪೊಸನೆಯ್ದಿಲೋಳಿಗು
ರ್ಬಿಸುವೆಡರಂ ತಮಸ್ಸಮಿತಿಗೋತೊಡಗೂಟಮನಾ ವಿಯೋಗದಿಂ ।
ದೆಸಗುವ ಚಕ್ರವಾಕಮಿಥುನಕ್ಕೆ ದಿಶಾನನದುಜ್ಜ್ವಳಿಕ್ಕೆಯಂ
ಬಿಸಿಗದಿರ್ಗಳ್ ಕವಿಲ್ತೊಡನೆ ಸೂಸಿದುವಾದಮ ಸುಪ್ರಭಾತದೊಳ್ ॥ ೭೮

ಇದೆ ಹೇಷಾಘೋಷದಿಂ ವಾಹಳಿಗೆ ಕರೆವವೋಲ್ ಕಟ್ಟಿ ಬಂದಶ್ವಮಾಯಿ
ರ್ದುದೆ [2]ಗುರ್ಬಿಂ[2] ಪಣ್ಣಿ ಬಂದೋಜೆಗೆ ನಿಱಿಸಿದ ಕಟ್ಟಾನೆ ಸೇವಾರತೋತ್ಸೇ ।
ಕದಿನೀಗಳ್ ದೇವ ಬಂದಿರ್ದಪುದು ಸಕಳರಾಜನ್ಯಕಂ ಮಂತ್ರಿವರ್ಗಂ
[3]ಪದನಂ ಪಾ[3]ರ್ದಿರ್ಪುದಿನ್ನುಪ್ಪವಡಿಸು ಜನತಾನೇತ್ರನೀರೇಜ[4]ಭಾನೂ[4] ॥ ೭೯

(ಲೀಲಾವತಿ, ೩–೮೪.)

ದಾನೇಭಂ ಪುಂಗವಂ ಕೇಸರಿ ಸಿರಿ ಸುಮನೋಮಾಲೆ ಚಂದ್ರಂ ದಿನೇಶಂ
ಮೀನಂ ಕುಂಭಂ ಕೊಳಂ ಪಾಲ್ಗಡಲಿಭುರಿಪುಪೀಠಂ ಸುರೋದ್ಯದ್ವಿಮಾನಂ ।
ಶ್ರೀನಾಗಾವಾಸಮುಚ್ಚಂ ಮಣಿ[5]ಚ[5]ಯಮನಲಜ್ವಾಲೆಯೆಂದಿಂತಿವೆಲ್ಲಂ
ಮಾನಾಲಂಕಾರನೊಳ್ ಮಾಡುಗೆ ಜಿನಜನನೀಷೋಡಶಸ್ವಪ್ನದೊಳ್ಪಂ ॥ ೮೦

(ಲೀಲಾವತಿ, ೩–೭೫.)

ನವರೋಮಾಂಚದ ಕೀಲ್ ಸಡಿಲ್ದು ತೊಡೆ [6]ತೋಳ್[6]ಮೆಯ್ಯೆಲ್ಲಮೆಚ್ಚತ್ತು ಚಿ
ತ್ತವಧೂಬಾಲಮೃಣಾಳಬಾಹುಲತಿಕಾಸಂಶ್ಲಿಷ್ಟರತ್ಯಂತಿಕೋ ।
ತ್ಸವಸಂಸ್ಕಾರಿಕಮಾಗೆ ಕಣ್ದೆಱೆದುವೊಂದೇ[7]ಕ[7]ಕ್ಷಣಂ ನಿಂದು ಮೈ
[8]ಸವಿದೆಟ್ದಂ[8] ಮಣಿಮಂಚತಳ್ಪತಳದಿಂ ಸಾಹಿತ್ಯರತ್ನಾಕರಂ ॥ ೮೧

(ಅನಂತನಾಥಪುರಾಣಂ, ೮–೭೦.)

ಮಧುರಾಜ್ಯಾವೇಕ್ಷಮಂ ನೀನೊಡರಿಸು ತಲಸಂಸ್ಪರ್ಶನಂ ಮಾಡು ಸಂಧ್ಯಾ
ವಿಧಿಯಂ ನಿರ್ವರ್ತಿಸಚ್ಛಾರುಣಮಣಿಗಣದಿಂದರ್ಘ್ಯಮಂ ಭಾಸ್ಕರಂಗೆ ।
ತ್ತು ಧರಾದೇವೋತ್ತಮಾವರ್ಜನ ವಿರಚನೆಯಂ ತಾಳ್ದು ಶುದ್ಧಾತ್ಮನಾಗಿ
ರ್ದಧಿದೈವಾರಾಧನಂಗೆಯ್ ವಿವಿಧವಿಧಿಸಪರ್ಯೋಪಚರ್ಯಾಂಶದಿಂದಂ ॥ ೮೨

---

1 ಕೂಟ (ಅ). 2 ಪರ್ವಿಂ (ಅ.ಕ). 3 ಸದನಂಸಾ (ಕ.ಖ.ಬ). 4 ಮಿತ್ರಂ (ಖ.ಬ). 5 ಘ (ಕ). 6 ಗಳ (ಕ.ಖ.ಬ). 7 ತ (ಕ.ಖ.ಬ). 8 ನಿಮಿರ್ದೆದ್ದಂ (ಕ.ಖ.ಬ).

ಹಳಚಿತು ಸೂರ್ಯೋದಯಮೀ
ಸ್ಥಳಕೆಲ್ಲಂ ಕಾವ್ಯಸಾರಮೊಳಗೆಂದುದು ಹೊ ।
ಯ್ಸಳವಂಶಮೇರು ಯಾದವ
ಕುಳಾಂಬರದ್ಯುಮಣಿ ಸೋಯಿದೇವನೃಪಾಲಂ ॥ ೮೩

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ಸೂರ್ಯೋದಯವರ್ಣನಂ ನವಮಾಶ್ವಾಸಂ ಸಂಪೂರ್ಣಂ.



# ಋತುವರ್ಣನಂ

## ವಸಂತೋದಯವರ್ಣನಂ

ತರು ಮೃಗ ಪಕ್ಷಿ ಮೇಘ ಜಲ ವಾಯು ದಿಶಾಜನ ಕಾಯಭೋಗ ಭಾ
ಸ್ಕರ ವಿಧು ರಾತ್ರಿ ವಾಸರ ಸುರಾಲಯ ಪರ್ವ ರತೋಪಚಾರ ಸಿಂ।
ಧುರಮದಜನ್ಮ ಯಾನ ಮದನೋದಯ ಸಸ್ಯವಿಶೇಷಭಾವದೊಳ್
ಪರಿಣತನಪ್ಪವಂಗೆ ಋತುವರ್ಣನವಿಸ್ತರಮೊಪ್ಪಿ ತೋಱುಗುಂ॥ ೧

ಪದದೊಳ್ ಠಾಯಿಗಳೋ[1]ಯರಂ[1]ಬಡೆಯೆ ವಾಕ್ಯಾರ್ಥಕ್ಕೆ ಪಕ್ಕಾಗೆ ರಾ
ಗದ [2]ಮರ್ಯಾದೆಯ[2]ನುಕ್ರಿಯಾಂಗುಳಿವಿಳಾಸಂ ಭಾವಮಂ ತಾ[3]ಳೆ[3] ಕ।
ಬ್ಬದ ನಿರ್ವಾಹದ ಮೇ[4]ಗೆ[4] ಬೈಸಿಕೆ ಬೆಡಂಗಂ ಬೀಱೆ ನಿಂದೊರ್ವಳೋ
ದಿದಳಾಂದೋಳದೆ ಪಲ್ಲವಾಧರೆ ವಸಂತೋತ್ಪದ್ಯಮಂ [5]ಪ[5]ದ್ಯಮಂ॥ ೨

(ಅನಂತನಾಥಪುರಾಣಂ, ೬–೭೧.)

ವಿಕಸತ್ಪುಷ್ಪಾಟ್ಟಹಾಸಂ ಸ್ಮಿತಕುಸುಮರಜೋಭಸ್ಮ[6]ವಿಭ್ರಾಜಿ[6] ಮಾದ್ಯ
ತ್ಪಿಕನಾದಂ ಭೃಂಗಸಿದ್ಧಾಂಜನರಸಘುಟಿಕಂ ಪಲ್ಲವೋದ್ಯಜ್ಜಟಂ ಕ।
ಯ್ಯ ಕಪಾಲಂ ಚಂದ್ರಬಿಂಬಂ ತನಗೆನೆ ಜಗತೀಚಕ್ರಮಂ ಚೈತ್ರಕಾಪಾ
ಲಿಕನೆಂಬಂ ಬಂದದೇಂ ಮೋಹಿಸಿದನೊ ಮಧುಬಿಂದೂದ್ಗಮಂ ಗಂಧವಾಹಂ॥ ೩

(ಲೀಲಾವತಿ, ೯–೧೧೯.)

ನನೆದೋಱುತ್ತದಿ[7]ರ್ಮುತ್ತೆ[7] ಮುಂತೆ ಪನೆಗಳ್ ತೋರ್ಪಂತೆ ತಂಗಾಳಿ ಕೆಂ
ಗೊನ[8]ರೊ[8]ಳ್ ದಟ್ಟಡಿಯಿಟ್ಟುದೊಳ್ನಗೆ ಪೊದಟ್ದುತ್ತಬ್ಜದೊಳ್ ಕೋಕಿಲಂ।
ಕೊನರಂ ಕರ್ಚಿ ತೊದಳ್ಸರಂಗೆಡೆದುದೆತ್ತಂ ನಂದನಶ್ರೀಯ ನಂ
ದನನಾನಂದ[9]ನ[9]ನನ್ಯಜಂಗಣುಗನಾಯ್ತೆಂತೀ ವಸಂ[10]ತೋದಯಂ[10]॥ ೪

(ಅನಂತನಾಥಪುರಾಣಂ, ೬–೭೨.)

---

[1] ರಣಂ (ಅ). [2] ಮಾಧುರ್ಯಮ (ಅ). [3] ಳ್ದೆ (ಅ). [4] ಲೆ (ಅ). [5] ಗ (ಅ).
[6] ವೈಭಾಸಿ (ಖ.ಘ). [7] ರ್ಗಂತಿ (ಅ). [8] ಯಾ (ಕ.ಖ.ಬ). [9] ಮ (ಕ.ಖ.ಬ).
[10] ತಾಗಮಂ (ಅ).

ಎಳವೆಱೆ ದಾಡೆ ಕೆಂದಳಿರೆ ನಾಲಗೆ ಮಾಮರನಳ್ಳಿಗೊಂಬಿನೊಳ್
ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ ಕೇಸರಮೆಂಬಿನಂ ಮನಂ।
ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ
ಗೊಳಿಸಿದುದುತ್ಕಕೀರ ಮದಕೋಕಿಲ ಗರ್ಜಿತ ತರ್ಜಿತಂಗಳಿಂ॥ ೫

(ಅಜಿತನಾಥಪುರಾಣಂ, ೬—೨೩ ; ಶಬ್ದಮಣಿದರ್ಪಣಂ, ಪುಟ ೫೫.)

ಮಧುಲಕ್ಷ್ಮೀನೃತ್ಯಹಸ್ತಂ ರತಿಯುವತಿಪಯಃಕೇಳಿಶೃಂಗಂ ಸುಧಾಂಭೋ
ನಿಧಿಥಕ್ಕಾವಾದ್ಯಕೋಣಂ ಮನಸಿಶಯಮಹಾತ್ರಸ್ತಹಸ್ತಾಂಕುಶಂ ವಾ।
ರಿಧರಾಧ್ವಕ್ಷೇತ್ರಸೀ[1]ರಂ[1] ಹಿಮಕರಸಲಿಲಾಧಾರಲೀಲಂ ತಟಾಕಾ
ವಧಿಯೆಂಬೊಂದಂದದಿಂದಂ ಪೆಱೆ ನೆಱೆ ಮೆಱೆದತ್ತಾರ ಕಣ್ಗಂ ಮನಕ್ಕಂ॥ ೬

ಸಿರಿ ಬಂದಾಶ್ರೈಸಿದಳ್ ಮಾಧವನುದರದೊಳೊತ್ತಿಟ್ಟುಕೊಂಡಂ ದಿನೇಶಂ
ಪಿರಿದುಂ ಕೂರ್ಪಂ ಸುಧಾಸೂತಿಯೆ ಮುನಿದಪನೆಮ್ಮನ್ವಯಕ್ಕೆಂದು ನೀರೇ।
ಜರುಹಂ ಕಾಯ್ಪಿಂ ನಿಜಾಗ್ರಾಯುಧವನಿಡೆ ಸಿಡಿಲ್ದೊಂದು ಭಾಗಂ ನಭಾಭ್ಯಾಂ
ತರದೊಳ್ ಸೂಸಿತ್ತೆನಲ್ಕೇನೆಸೆದುದೊ ಭಗಣಾನೀಕದಿಂದರ್ಧಚಂದ್ರಂ॥ * ೭

ವಿರಹಿಯ ಗಂಟಲಗಾಳಂ
ಸ್ಮರವೀರನ ಮಸೆದ [2]ಸೆಂ[2]ಡುಗೋಲ್ ಮಧುಲಕ್ಷ್ಮೀ।
ತರುಣಿಯ ಸೆಳ್ಳುಗುರೆನೆ
ಕರಮೆಸೆದತ್ತಂದು ಕೊಂಕಿದೆಳವೆಱೆ ನಭದೊಳ್॥ ೮

ಒತ್ತಂಬದೆ ವಿರಹಿಗಳಂ
ಚಿತ್ತಭವಂ ಬಂದಿವಿಡಿದು ಗಂಟಲ ಬಳೆಯಂ।
ಕೆತ್ತಿಸುವ ಬೊಮ್ಮಪಾಶದ
ಕೃತ್ತಿಗೆಯೆನೆ ತೊಳಗಿ ಬೆಳಗಿತೆಳವೆಱೆ ನಭದೊಳ್॥ ೯

ತಿಳಿಪಲ್ ವಾಸಂತಿಯಂ ಸಂದಿ[3]ಸಿ[3] ಪುಗಲೆನೆ ಪುಂಸ್ಕೋ[4]ಕಿಲಂ ಧಾಷ್ಟ್ಯದಿಂ[4]ಬಂ
ದೊಳಪೊಕ್ಕಡ್ಡೈಸಿ ಮಲ್ಲೀಮುಕುಳಕಲಿತಭೃಂಗಾವಳೀನೀಲಮುಕ್ತಾ।

---

[1] ಲಂ (ಬ). [2] ಸಿಂ (ಕ.ಖ.ಬ).

* ಈ ಪದ್ಯವು ಎಂಟನೆಯ ಸಂಧಿಯ ೨೫ನೆಯ ಪದ್ಯವಾಗಿ ಹಿಂದೆಯೇ ಬಂದಿದೆ. ಎಲ್ಲ ಪ್ರತಿಗಳಲ್ಲಿಯೂ ಈ ಸ್ಥಳದಲ್ಲಿ ಪುನಃ ಉಪಯೋಗಿಸಿರುವುದರಿಂದಲೂ ಇದರ ಮೂಲ ಸ್ಥಾನವು ಇದೋ ಅದೋ ಎಂಬುದನ್ನು ಸ್ಪಷ್ಟವಾಗಿ ನಿಷ್ಕರ್ಷೆ ಮಾಡಲು ಸಾಧ್ಯವಿಲ್ಲವಾದುದರಿಂದಲೂ ಇದನ್ನು ಇಲ್ಲಿ ಉಳಿಸಿಕೊಂಡಿದೆ. [3] ಸೆ (ಅ). [4] ಕಿಲಡ್ಡಂಡಿಮಂ (ಕ.ಖ.ಬ).

ಫಳಮಂ ತಂದಿತ್ತು ಪಾದಂಬಿಡಿದು ನೆಗೆವಿನಂ ಕಂಟಕಂ ಚೂತಿಕಾಕೋ
ಮಳೆಯಂ [1]ನಿಶ್ಶೇಷದೋ[1]ಷಂ [2]ಮೆ[2]ಚ್ಚೆಯೆ ತಿಳಿಪಿದಂ ಪ್ರೇಮಕಾಂತಂ ವಸಂತಂ॥

(ಅನಂತನಾಥಪುರಾಣಂ, ೬-೭೪.)

ಮದನಂಗೀ ಲೋಕಮಂ ಸಾಧಿಸುವೆಡೆಗೆ ನೆರಂ ಬಂದುದೆಂಬಂದದಿಂದು
ನ್ಮದಕರ್ಣಾಟದ್ವಿ[ಜೋ][3]ತ್ಕೂಜಿತಕಳನಿನದಂ ಬಂದುದೆಂಬಂದದಿಂ ಪೋ।
ಣ್ಮಿದ ಭಾಸ್ವಚ್ಚಂದ್ರಬಿಂಬಕ್ಕಭಿನವಕಿರಣಂ ಬಂದುದೆಂಬಂದದಿಂ ಬಂ
ದುದು ನೀಳಾಂದೋಳಕೇಳೀವಿಳಸನಲಲನಾಗೀತಕಾಂತಂ ವಸಂತಂ॥ ೧೧

ಸ್ಮರರಾಗಾಂಧತ್ವದಿಂದಂ ಪಗಲೊಳಮಸತೀಕೇಳಿ ಪೊಣ್ಮಲ್ ವಿಯೋಗಾ
ತುರಜೀವಾಹಾರದಿಂದಂ ರತಿಪತಿ ತಣಿಯಲ್ ಪುಷ್ಪಚಾಪಾಸ್ತ್ರಟಂಕಾ।
ರರ[4]ವೋದ್ಭಿನ್ನಪ್ರಪಾಂಥ[4]ಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂ
ತರದೊಳ್ ಸೂಸುತ್ತಿರಲ್ ಬಂದುದು ಶಿಶಿರನೃಪೋದ್ಯತ್ಕೃತಾಂತಂ ವಸಂತಂ॥ ೧೨

(ಕಾದಂಬರಿ, ಪೂ.ಭಾ., ೭೨೦.)

ಕಳಿಕಾಸಂಜಾತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿ ಕಂಕೆ
ಲ್ಲಿ ಲತಾಂತಾಕ್ರಾಂತವಾಸಂತಿಕಮೆಸೆದುದು ಯೋಗಿವ್ರಜಸ್ವಾಂತಕುಂತಂ।
ವಿಲಸನ್ಮಲ್ಲೀಲತಾಂತಂ ರಟದಳಿಪಟಲಧ್ವಾಂತಮಿಂದುಪ್ರಭಾಸಂ
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಕಂತುಕಾಂತಂ ವಸಂತಂ॥ ೧೩

(ಜಗನ್ನಾಥವಿಜಯಂ, ೧೪-೪೨.)

ಬನಮಂ ಕೆಂದಳಿರಿಂದೆ ಬಾಸಣಿಸುತುಂ ದಿ[5]ಗ್ಭಿತ್ತಿ[5]ಯಂ ಬಂದ ಮಾ
ವಿನ [6]ಕಂ[6]ಪಿಂದಮೆ ಪೂಸುತುಂ ವಿರಹಿಯಂ [7]ಮತ್ತಾ[7]ಳಿನೀ ಕೋಕಿಲ।
ಧ್ವನಿಯಿಂದಂಜಿಸುತುಂ ಸಮಸ್ತಜನಮಂ ಪುಷ್ಪಾಸವಾಸಾರದು
ರ್ದಿನದಿಂ ಸೊರ್ಕಿಸುತುಂ ಪೊದಟ್ಟುದು ಜಗತ್ಕಾಂತಂ ವಸಂತಾಗಮಂ॥ ೧೪

(ಕಾದಂಬರಿ, ಉ.ಭಾ., ೭೮೧.)

ಬೆಳಪೀ ಚಂದ್ರಾಂಶು ಪೂತೀ ವಿಚಕಿಳ[8]ಮಲೆವೀ[8] ತಂಬೆಲರ್ ಬಗ್ಗಿಪೀ ಕೋ
ಕಿಳವೆನ್ನೊಳ್ ತಾವೆ ಮಾಟ್ಕುಂ ಭುವನಜಯಮನಾಂ ಕಯ್ದುಗೆಯ್ವನ್ನಮೇನಂ।
ದೆಳಮಾವಂ ನೆಮ್ಮಿ ತನ್ನೋಪಳ ಮೊಲಗೆಲನಂ ನೋಡುತುಂ ತುಂಬಿಯಿಂದಂ
ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ॥ ೧೫

(ಜಗನ್ನಾಥವಿಜಯಂ, ೧೪-೪೧.)

---

1 ವಿಶ್ಲಿಷ್ಟರೋ (ಅ). 2 ಮ (ಅ). 3 ಜ (ಅ). 4 ವಂ ಪ್ರೊದ್ಭಿನ್ನಪಾರ್ಥ (ಖ.ಬ). 5 ಗ್ರಾಜಿ (ಅ). 6 ಕೆಂ (ಕ.ಖ.ಬ). 7 ಮುಕ್ತಾ (ಕ.ಖ.ಗ.ಬ). 8 ಲತೆಯಿಂ (ಕ.ಖ.ಗ.ಬ).

ಅಲರ್ವದನಾಯ್ತು [1]ಮುನ್ನಿನೆ ತಮಾಲದ ಕಿಟ್ಗವಲಿಂ[1] ತಳಿರ್ತ ಮಾ
ವಲೆದುದು ಬೆಳ್ವುಗೂಡಿದುದು ಮಲ್ಲಿಗೆ ತುಂಬಿಯ ಸಂತೆ ಸಂಭ್ರಮಂ।
ನಿಲೆ ನೆರೆದತ್ತು ಬಾನವೆಱೆ ಕೇದಗೆ ಬೆಳ್ಗಱಿಗಟ್ಟಿದಂತೆವೋಲ್
ಜಲಕನೆ ಮೇಲೆಮೇಲೆ ಕಳೆವೊತ್ತುದು ಬಂದ ವಸಂತಮಾಸದೊಳ್॥ ೧೬

ಒದವಿ ಧರಾತಳಕ್ಕೆ ಬರುತಿರ್ದ ಬಸಂತನ ಕೂಡೆ ಮಾವು ಬಂ
ದುದು ಮಧುದೂತಿ ಬಂದುದೆಳಮಲ್ಲಿಗೆ ಬಂದುದಶೋಕವಲ್ಲಿ ಬಂ।
ದುದು ಸುರಹೊನ್ನೆ ಬಂದುದಿನಿತುಂ ನೆಱೆ ಬಂದುವು ಜಾತಿಯೊಂದೆ ಬಾ
ರದು ಕುಸುಮಾಸ್ತ್ರಭೂಪನದನಾವ ಜಗದ್ವಿಜಯಕ್ಕೆ ಪೇೞ್ವನೋ॥ ೧೭

ನನೆಯ ತೊಡಂಬೆ ಮಲ್ಲಿಗೆಯೊಳೊಂದೆರಡಾದುವು ಮಾಮರಂಗಳೊಳ್
[2]ಕೊ[2]ನರ್ಗೊನೆ ಮೂಱು ನಾಲ್ಕು ತಲೆದೋಱಿದುವುಂಡಿಗೆ ಸಾಧ್ಯಮಾದುದಿಂ।
[3]ದ[3]ನಗೆ ಜಗತ್ರಯಂ ಮಲೆವರಾರೆನುತುಂ ಕುಸುಮಾಯುಧಂ ರತಿ
ಸ್ತನಪರಿರಂಭಣಪ್ರಣಯಿ ಪಾಡಿಸುವಂ ಬಿರುದಂ ಮದಾಳಿಯಿಂ॥ ೧೮

(ಮಲ್ಲಿನಾಥಪುರಾಣಂ, ೫-೨೪.)

ಚದುರರ ಮೆಚ್ಚನೆಚ್ಚಱಿಪ ಮಾಧವಲಕ್ಷ್ಮಿಗೆ ಪತ್ರಭಂಗಮಾ
ದುದು ವನಮಾಲಿ ಪಂಕ್ತಿಗುರುಳಾದುದು ತುಂಬಿಗಳೋಳಿ ನಾದಮಾ।
ದುದು ಪಿಕನಾದಮು[4]ಟ್ಟ[4] ಬಿಳಿದಾದುದು ಚಂದ್ರಿಕೆ ನಲ್ಮೆ ದಿ[5]ಟ್ಟಿ[5]ಯಾ
ದುದು ಮಲಯಾನಿಳಂ ತಿಲಕಮಾದುದು ಶೀತಮರೀಚಿಮಂಡಲಂ॥ ೧೯

ವನರುಹ[6]ಮೆ[6]ಡ್ಡಮಪ್ಪ ಮೊಗಮಾದ ತಳಿರ್ ತಳಮಾದ ಕೋಕಿಳ
ಧ್ವನಿ [7]ದನಿಯಾ[7]ದ ಪಣ್ಣಡಕೆ ಬಾಯ್ದೆಱೆಯಾದೆಳವಳ್ಳಿ [8]ಮಿಕ್ಕ[8] ನೂ।
ತನತನುವಾದ ಮಲ್ಲಿಗೆಯ ತುಂಬಿಯ ಕೂಟಮೆ ನೋಟಮಾದ ನಂ
ದನ ವನಲಕ್ಷ್ಮಿ [9]ಮಾಧವಮಹೀಶನ ಕಾಂತೆಯೊ ಕಂತುಕಾಂತೆಯೋ[9]॥ ೨೦

(ಶಾಂತಿಪುರಾಣಂ, ೭-೧೧.)

ಕಳಹಂಸೀರಾಜಗೇಹಂ ಮಧುಪಮದ[10]ವ[10]ತೀಪಾನಕೇಳೀಗೃಹಂ ಮಂ
[11]ಡ[11]ಳಲಕ್ಷ್ಮೀಮಂಡ[12]ನಾ[12]ಸ್ಥಾಯಿಕೆ ಮಲಯಮರುದ್ವಾ[13]ಹಿನೀ[13]ಭೂಮಿ
[14]ಕೋ[14]ಕೀ।

---

[1] ಮುಂನೆನೆಸೆಮಾಳಧವಿಕಿಳ್ಗಮಂ (ಕ). [2] ಕ (ಅ). [3] ನ್ನೆ (ಅ). [4] ಟ್ಟೆ (ಕ.ಖ.ಗ.ಬ) [5] ಟ್ಟ (ಕ), ಟ್ಟೆ (ಖ.ಬ). [6] ವೆ (ಕ.ಖ.ಬ). [7] ಸರಮಾ (ಅ). [8] ಯೇಳೆ (ಅ). [9] ಕಣ್ಗೆಸೆದು ತನ್ನನೆ ನೋಡಿಸಿದಳ್ ತಯಾರ್ಯರಿಂ (ಅ). [10] ರ (ಬ). [11] ಗ (ಅ). [12] ನಾ (ಅ). [13] ಹಳೀ (ಕ.ಖ.ಬ). [14] ಕೇ (ಕ.ಖ.ಗ.ಬ).

ಕುಳಸದ್ಮಂ ಕಾಮುಕಾಳೀಕನದವದಹನಂ ಕಾಮಚಕ್ರೇಶಚಾತು
ರ್ಬಳಚಕ್ರಂ ಜೈತ್ರ[1]ಜೈತ್ರ[1]ಧ್ವಜಚಯಮಲರ್ದುದ್ದಂಡಮಾಯ್ತಬ್ಜಷಂಡಂ॥ ೨೧

(ಅನಂತನಾಥಪುರಾಣಂ, ೬–೭೫.)

ಸ್ಮರಕಾಂತಾಪ್ರೇಯಸೀಸ್ಥಾಸಕಘುಸೃಣಲತಾಮಂಟಪಂ ದರ್ಪಕಾಧೀ
ಶ್ವರದಿಗ್ಜೈತ್ರೋತ್ಸವೋತ್ತಂಚಿತ ಮಣಿಮಯದೂಷ್ಯಂ ಮೃಗೀಭೂತಕಾಮಾ।
ತುರದಾವಜ್ವಾಳಿಕಾಮಂಜರಿ ಮಧುಮಧುಪಾನಪ್ರಮತ್ತಾಟವೀಪಿಂ
ಜರಿತಾಸ್ವಾಡಂಬರಂ ಪೂತೆಸೆದುದಸದಳಂ ಪ್ರೋತ್ಪಲಾಶಂ ಪಲಾಶಂ ॥ * ೨೨

(ಅನಂತನಾಥಪುರಾಣಂ, ೬–೭೬.)

ಇನಿಯರ ಕಂಠರಾಗರಸಮಂ [2]ದಳ[2]ವೇೞಿಸುವಂತೆ ಕಾಮದೇ
ವನ ಕರವಾಳ್ಗೆ ಕಾಮಿಹೃದಯಾರುಣವಾರಿಯನೆತ್ತುವಂತೆ ನಂ ।
ದನವನಲಕ್ಷ್ಮಿಯಂ ಘುಸೃಣದಿಂ ಪೊರೆವಂತೆ ಸುಧಾಂಶು ಸಂಜೆಗೆ
ತ್ತನುವಿಸುವಂತೆ ಕೆಂದಳಿರ ಪೊಂಪುಳಿ [3]ಪಪ್ಪ[3]ಕಮಾಯ್ತಶೋಕೆಯೊಳ್ ॥ ೨೩

(ಅನಂತನಾಥಪುರಾಣಂ, ೬–೭೭.)

ಎಳಲತೆಯ ಲಾಸ್ಯ[4]ಲೀಲೆಯೊ
ಳ[4]ಳಿನೀಗೀತಕ್ಕೆ ನಿಂದು ಬಾಜಿಪ ಮಂದಾ ।
ನಿಳನಟನ ಪೊನ್ನ ತಾಳಂ
ಗಳಿವೆನಿಸಿದುವಲರ್ದ ಕರ್ಣಿಕಾ[5]ಪ್ರಸರಂಗಳ್[5] ॥ ೨೪

(ಅನಂತನಾಥಪುರಾಣಂ, ೬–೭೮.)

ಸೊಡ[6]ರ ಕುಡಿ[6]ಯಗೆ[7]ಗಳಂ ಪಸು
ರ್ವ[7]ಡಲಿಗೆಗಳೊಳಡಕಲಿಟ್ಟು ರತಿ ಪೊಯ್ದುವೋಲೇಂ ।
ಜಡಿದುದೊ ಸಂಪಗೆ ನನೆಯಿಂ
ಜಡಿದುದು ಮಧುಲಕ್ಷ್ಮಿ ತೊಟ್ಟ ಪೊಸಪೊಂದೊಡವಂ ॥ ೨೫

(ಅನಂತನಾಥಪುರಾಣಂ, ೬–೭೯.)

ಪನೆಗಳ್ ಪಣ್ಣನೆ ತೋರ್ಪ ಮೆಲ್ಲನೆ ಮುಗುಳ್ವಾಯ್ ನುಣ್ದಳಿರ್ ಕೋಕಿಲ
ಧ್ವನಿ ಮುದ್ದಾದ ತೊದಳ್ಸರಂ ಪೊಳೆವ ಮಾಂಗಾಯ್ ಕಾಯಿ ಲಾಲಾಜಲಂ ।

---

[1] ರಾಜ (ಅ). * ಈ ಪದ್ಯ (ಖ.ಬ) ಪ್ರತಿಗಳಲ್ಲಿಲ್ಲ. [2] ಮದ (ಖ.ಬ). [3] ಪಂಪ (ಕ.ಖ.ಗ). [4] ದಳೆಯೊಳಗ (ಅ). [5] ರಪ್ರಸರಂ (ಅ). [6] ಗುರ್ಡಿ (ಅ). [7] ಯಂ ಪಚ್ಚೆಯಪ (ಅ).

ಸೊನೆ ಪೆಣ್ದುಂಬಿಯ ಜಿಂಕು ತುಂಬಿಗಳಪಂ ಕೈಸಾರ್ಕೆ ಕೈವರ್ಪ ಚೆ
ಲ್ವನೆ ಪೋಲ್ತಿರ್ದುವು ನಂದನಾವಳಿಗಳೊಳ್ ಮಾಕಂದಷಾ ಕಂದನಂ ॥ ೨೬

ಅರಗಿಳಿ ದರ್ಪ ಪೂತರಳ್ದ ಮಲ್ಲಿಗೆ ಜನ್ನಿವರಂ ತಳಿರ್ ಮನೋ
ಹರತರಮಪ್ಪ ಕಾಸೆ ಕಟಲ್ದಲ್ಲೊಗುವೊಳ್ಳಲರಕ್ಷತಂಗಳಾ ।
ಗಿರೆ ಮಱಿದುಂಬಿಯಿಂಚರಮೆ ಸಾಮರವಕ್ಕಣೆಯಾಗೆ ಕಾಮನಂ
ಪರಸುವಿಳಾಮರಂಬೊಲೆಸೆದಿರ್ದುದು ಚೂತಕುಜಂ ವಸಂತದೊಳ್ ॥ ೨೭

ರವದಳಿ ಗೆಜ್ಜೆ ಸೋಗೆಗಳೆ ಚುಂಚು ನವಾಂಕುರ ರಾಜಿ ದಾಡೆ ಪ
ಲ್ಲವಮುರಿಗಣ್ ಪಿಕಂ ಡಮರುಗಂ ಸೆಳೆಗೊಂಬು ಭುಜಾಸಿ ಕಿಂಕಿಣೀ ।
ರವಸಮುದಾರಕೀರತತಿ ಪಣ್ಗಳೆ ಪಂದಲೆಮಾಲೆಯಾಗೆ ಭೈ
ರವನವೊಲೇಂ ವಿಯೋಗಿಗತಿಭೈರವಮಾದುದೊ ಬಂದ ಮಾಮರಂ ॥ ೨೮

ಪೊಸ ನನೆಯೊಳ್ ಪಸುರ್ಪಲರೊಳಂ ಚಿರಮಲ್ಲದ ಬೆಳ್ಪು ಪಲ್ಲವ
ಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ ।
ಮಿಸುಗುವ ಕರ್ಪು ಬರ್ಟಿಸಿದವೊಲ್ ಬಗೆಗೊಳ್ವಿನೆಗಂ ಬಸಂತದೊಳ್
[1]ಬಸದಿಯ ಬಾಗಿಲಂ ತೆಱೆದ ಮಾಷ್ಕೆ[1]ಯೊಳಿರ್ದುದು ಬಂದ ಮಾಮರಂ ॥ ೨೯

(ಆದಿಪುರಾಣಂ, ೧–೬೬.)

ಎಳಗಿಳಿವಿಂಡಿನೋದುವ ಮಠಂ ಭ್ರಮರಂಗಳ ಗೀತಶಾಲೆ ಕೆಂ
ದಳಿರ್ಗಳ ಜನ್ಮಭೂಮಿ ವನಲಕ್ಷ್ಮಿಯ ಪೆರ್ಮಗನೋತಗಲ್ದ ಕೋ ।
ಮಳೆಯರ ಜೂಜು ಭೂತಳದ ಕಲ್ಪಕುಜಂ ಸಕಲಾವನೀರುಹಂ
ಗಳ ತಲೆನಾಯಕಂ ತುಱುಗಿ ಬಂದುದು ಚೂತಕುಜಂ ವಸಂತದೊಳ್ ॥ ೩೦

ನನೆಗೊಂಬಾಣತಿಮಾಡಿ ಪಾಡುವವೊಲಿರ್ದತ್ತು ಭೃಂಗಾಂಗನಾ
ಧ್ವನಿಯಿಂದಂ ತಳಿರ್ಗೊಂಬು ಪೆರ್ಚಿ ನಗುವಂತಿರ್ದತ್ತು ಪುಂಸ್ಕೋಕಿಲ ।
ಧ್ವನಿಯಿಂದಂ ಮಿಡಿಗೊಂಬು ಬಾಜಿಸುವವೋಲಿರ್ದತ್ತು ಕೀರೋಲ್ಲಸ
ದ್ಧ್ವನಿಯಿಂದಂ ಪೊಸಸುಗ್ಗಿಯುತ್ಸವಮನಾದಂ ಬೀಱುವಿಮ್ಮಾವಿನೊಳ್ ॥ * ೩೧

ತಳಿರೊಳ್ಗೊಂಬಿನೊಳೂಳ್ವ ಕೋಕಿಳಕುಳಂ ಪೂಗೊಂಬಿನೊಳ್ ಪಾಡುತಿ
ರ್ಪಳಿವೃಂದಂ ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ ಪಾಯ್ದು ಬಂ ।

---

[1] ಬಸಮಾಳ್ತಿ ಬಾಳ್ತಿಗಳ ಬಾಷ್ಕೆ (ಕ), ಬಸತಿಗಳ ಬಾಳ್ತಿ ಬಾಳ್ತಿಗಳಬಾಳೆ (ಖ,ಬ).
* ಈ ಪದ್ಯ (ಕ) ಪ್ರತಿಯಲ್ಲಿಲ್ಲ.

[1]ದೆಳ[1]ಸುತ್ತಿರ್ಪ ಶುಕಾಳಿ [2]ಕೆಯ್ವ ಬೆಸದೊಳ್[2] ತಂತಮ್ಮ ಠಾಣಾಂತರಂ
ಗಳೊಳಿರ್ದಂಗಜತಂತ್ರದಂತೆಸೆವಿ[3]ನಂ[3] ಚೆಲ್ವಾದುದಿಮ್ಮಾವುಗಳ್ ॥ ೩೨

(ಆದಿಪುರಾಣಂ, ೧೧–೯೬.)

ಅಲರಂಬಾದುದು ನಿನ್ನ ಕೋರಕದಿನೆ[4][ನ್ನಾ][4] ಚೆನ್ನವಿಲ್ ನಿನ್ನ ಗೊಂ
ಚಲ ಪೂವಿಂ ತಳೆದತ್ತು ತೋಮರಮ[5]ನಿನ್ನೆನ್ನಾ[5]ಜ್ಞೆ ನಿನ್ನಿಂದ ಸ ।
ತ್ಫಲಮಾಯ್ತೆಂದು ಮನೋಜರಾಜ[6]ನೆ[6] ಪಸಾಯಂಗೊಟ್ಟ ಕೆಂಬಟ್ಟೆಯಂ
[7]ತಳೆದಂತಾದುದು[7] ನೀಳ್ದ ಕೆಂದಳಿರ್ಗಳಿಂದಂ ಬಂದ ಮಾಕಂದದೊಳ್ ॥ ೩೩

(ಅನಂತನಾಥಪುರಾಣಂ, ೬–೮೬.)

ರತಿಗವತಂಸಮಾದ ತಳಿರಾವ ಮರಕ್ಕೊಳವೆನ್ನ ಬಿಲ್ಗೆ ಸಂ
ಗತಶರಮಾದ ಪೂಗುಡಿಗಳಾವ ಮರಕ್ಕೊಳವನ್ಯಪುಷ್ಪಮುಂ ।
ಕತೆಗಗದಂಗಳಾದ ಕೊನರಾವ ಮರಕ್ಕೊಳವೆಂದು ಮನ್ಮಥಂ
ಸ್ತುತಿಯಿಸಿ ಮಾಮರಕ್ಕೆ ಕುಜರಾಜಸಮಾಖ್ಯೆಯನಿತ್ತನತ್ತಿಯಿಂ ॥ ೩೪

(ಚಂದ್ರಪ್ರಭಪುರಾಣಂ, ೭–೪೫.)

ವನಮಾಲಾ[8]ಕ[8]ಳಿತಂ ಸುಪ[9]ರ್ಣಮಿ[9]ಳಿತಂ ಸತ್ಕಾಂತಿಪೀತಾಂಬರಂ
ಘನಸುಚ್ಛಾಯನನಂತಭೋಗಿನಿಳಯಂ ಲಕ್ಷ್ಮೀಸಮೇತಂ ಸುದ ।
ರ್ಶನಸೇವ್ಯಂ ಸುಮ[10]ನಸ್ಸಮೂಹಶರಣಂ[10] ತೋಡಾಯ್ತು [11]ಪೇಂದ್ರಂಗೆ[11] ಮ
ಜ್ಜನಕಂಗೀ ಮರನೆಂದು ಮಾಮರಕೆ ಕಾವಂ ಕೊಟ್ಟನಾ[12]ತಿಥ್ಯ[12]ಮಂ ॥ ೩೫

(ಪುಷ್ಪದಂತಪುರಾಣಂ, ೮–೮೦.)

ತಳಿರೊಳ್ ನೀನೆ ಬೆಡಂಗನಯ್ ನನೆಗಳೊಳ್ ನೀಂ ನೀಱನಯ್ ಪುಷ್ಪಸಂ
ಕುಳದೊಳ್ ನೀನೆ ವಿಳಾ[13]ಸಿಯುಯ್[13] ಮಿಡಿಗಳೊಳ್ ನೀಂ [14]ಚೆಲ್ವನಯ್[14] ಪಣ್ತ ಪ ।
ಣ್ಗ[15]ಳೊಳೋ[15]ವೋ ಪೆಱತೇನೊ ನೀನೆ ಭುವನಕ್ಕಾರಾಧ್ಯನಯ್ ಭೃಂಗಕೋ
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ [16]ಚೆನ್ನಂ[16]ಗಳೇ ॥ ೩೬

(ಆದಿಪುರಾಣಂ, ೧೧–೯೮.)

---

1 ಡುಳಿ (ಅ). 2 ತಮ್ಮ ಬೆಸದಿಂ (ಅ). 3 ನಿಂ (ಅ). 4 ನ್ನಂ (ಕ.ಖ.ಬ). 5 ನೆನ್ನೊಂದಾ (ಅ). 6 ನ (ಅ), ನು (ಕ.ಖ.ಬ). 7 ಚಲದಂತಾದುವು (ಅ). 8 ಮಿ (ಅ). 9 ರ್ವಲು (ಅ). 10 ನಃಪ್ರತಾನನಿಚಿತಂ (ಅ). 11 ನೋಡಲ್ಕೆ (ಕಾ.ಸಾ). 12 ತೋದ್ಯ (ಕಾ.ಸಾ). 13 ಸನ್ಯೆ (ಕ.ಖ.ಬ.ಗ). 14 ಸೊಂಪನ್ಯೆ (ಖ.ಬ). 15 ಳಿನೋ (ಅ). 16 ಚಿಹ್ನಂ (ಕ.ಖ.ಬ).

ಒಂದೆರಡುಃ ಮೂಱು ನಾಲ್ಕರ
ಲಿಂದ್ಯೈದಾಱೇೞು ಮಿಡಿಗಳಿರದೆಂಟೊಂಬ ।
ತ್ತೊಂದಿದ ಪಣ್ಗೊನೆಯಿಂ ಪ
ತ್ತುಂ ದೆಸೆಗಂ ಮಾವು ಬೀಱುತಿರ್ದುದು ಸಿರಿಯಂ ॥ ೩೭

ಕಳಿಕೆ ಕೊನರ್ ತಳಿರ್ ಮುಗುಳಲರ್ ಮಿಡಿ ಕಾಯ್ ನಸುದೋರೆ ದೋರೆಪ
[1]ಣ್ಗಳಿನಿರದಾ[1]ಗಳಾವ ಪರಿಯಿಂ ನಡೆ ನೋೞ್ಪರ ಮಾತೆ ತಾನೆ ಕ ।
ಣ್ಗಳ ಸಿರಿ[2]ಯಾಗಿ[2] ರಮ್ಯಮೆನಿಸಿರ್ದುದು ವಿಯೋಗಿಜನಕ್ಕೆ ವಲ್ಲಭಾ
ವಳಿಗದು ಡಾಮರಂ ಮದನತೋಮರಮಾದುದು ಬಂದ ಮಾಮರಂ ॥ ೩೮

(ಜಗನ್ನಾಥವಿಜಯಂ, ೧೪–೨೭.)

ಎಸೆವ ನವಾಂಕುರಂ ಕಳಿಕೆ ಪೆರ್ಚುಱ ಕೊನರ್ ಕೊನೆ ಕೆಂದಳಿರ್ ತಳಿರ್
ಪಸುರೆಲೆ ಚಿಕ್ಕ ಸಣ್ಣನನೆ ಬಲ್ನನೆ ಮೊಗ್ಗೆ ಮರಳ್ವ ಮೊಗ್ಗರಂ ।
ನಸುಮಿಡಿ ಸಿಂಪು ಪೂಮಿಡಿ ಬಟಲ್ಮಿಡಿ ಕಾಯ್ ಪೊದಟ್ಟ ಕಾಯ್
ನಸುಪರೆದೋರೆ ದೋರೆಯರೆವಣ್ ತನಿವಣ್ಣೆಸೆದತ್ತು ಮಾಮರಂ ॥ ೩೯

ಸೊನೆಯಿಂ ಗಂಧದಿನಗ್ರಪಲ್ಲವದಿನಾದಂ ನೀಳ್ದ ಕೊಂಬಿಂ ಜಗ
ಜ್ಜನಮಂ ಬೆರ್ಚಿಸುತಿರ್ಪ ಕಾಯಬಲದಿಂ ಭದ್ರತ್ವಮಂ ತಾಳ್ದಿ ತೊ ।
ಟ್ಟನೆ ಮಾಡಿತ್ತತಿಪೂತ ಚೂತಮಹಿಜಾತಂ ಪ್ರೀತಿಯಿಂ ಕಂತುಗಿಂ
ತು ನಿತಾಂತಂ ಮದದಂತಿಯುಂತಿರೆ ತದೀಯಸ್ವಾಂತವಿಭ್ರಾಂತಿಯಂ ॥ ೪೦

ತುಱುಗಿ ತಳಿರ್ತ ಕೊಂಬು ನೆಱೆ ಪೂತು ಮರಲ್ದುಮರಲ್ದ ಕೊಂಬು ಕಿ
ಕ್ಕಿಱಿಗಿಱಿದಳ್ಳೆಗೊಂಬು ಸೆಳೆಗೊಂಬೆಳಗೊಂಬು ಕವಲ್ತ ಕೊಂಬು ಕಾ ।
ಯ್ತೊಱಗಿದ ಕೊಂಬು ಪಣ್ಗೊನೆಯ ಪಿಂಗೊನೆಯಂ ಕೆಳೆಗೊಂಡ ಕೊಂಬು ಬಿ
ತ್ತಱಿಯದ ಬೀಜಗೊಂಬೆಸೆದುದಾಮ್ರವನಾಂತರದೊಳ್ ನಿರಂತರಂ ॥* ೪೧

ಅವಿರಳವಾದ ಮೆಯ್ವುಸುರೆ [3]ಪಚ್ಚೆದಿಮಿರ್[3] ತಳಿರುಟ್ಟ ಪಟ್ಟೆಯೊ
ಪ್ಪುವ ತಿಳಕಂ ಮಧುವ್ರತಮುಲರ್ದಲಗೊಂಚಲೆ ದಂಡೆ ಕೋಕಿಲಾ ।
ರವಮದು ಬೀರಮದ್ದಳೆಯ ನಿಸ್ವನಮಾಗಿರೆ ಕಟ್ಟಿ ಬಂದ ಕಂ
ತುವ ಬಿರುದಂ[4]ಕರಂತೆ[4] ಕರವೊಪ್ಪಿದುವಂದಿನ ಬಂದ ಮಾವುಗಳ್ ॥ ೪೨

(ಚಂದ್ರಪ್ರಭಪುರಾಣಂ, ೭–೪೨.)

---

1 ಣ್ಬಳಸಿರಲಾ (ಅ). 2 ತಾನೆ (ಅ). * ಈ ಪದ್ಯ (ಕ) ಪ್ರತಿಯಲ್ಲಿಲ್ಲ.
3 ಪತ್ತಿದುವುರ್ (ಖ.ಬ). 4 ದದಿಂದೆ (ಅ).

ಮಿಳಿರ್ವೆಳಗೊಂಬು ಕೈ ಕುಳಿರ್ವ ಕೆಂದಳಿರೊಂದಿದ ಕರ್ಣತಾಳಮಿ
ಟ್ಟಳಮೆನೆ ಸೋರ್ವ ಸೋನೆ ಮದಭೃಂಗ[1]ಕು[1]ಲಧ್ವನಿ ಭೃಂಗಮಾದ ಕೋ ।
ಕಿಳರುತಿ ಬೃಂಹಿತಸ್ವನ ಬಿಗುರ್ತುರ್ ತಳಿರ್ತೆಳವಳ್ಳಿ ಶೃಂಖಲಾ
ವಳಿಯೆನೆ ಮುಟ್ಟಿಬಂದುದೆಳಮಾಮರನೆಂಬ ಮದಾಂಧಸಿಂಧುರಂ ॥ ೪೩

ಎಳದಳಿರೆಂಬ ಮೇಲು[2][ದಲಸಲ್][2] ಸೆಳೆಗೊಂಬುಗಳೆಂಬ ತೋಳ್ಗಳಿಂ
ದಳಿಕುಳಮೆಂಬ ಕುಂತಳಮನೋಸರಿಸುತ್ತಲರೆಂಬ ಕಣ್ಮಲರ್ ।
ಪೊಳೆಯೆ ಪೊದಟ್ಟ ಪಣ್ಣಲೆಯ ಪೆರ್ವೊಲೆಯೊತ್ತಿನದೊಂದು ಭಾರದಿಂ
ತೊಲಗದೆ ನಿಂದು ಚೂತಲತೆ ನೋಡಿದಳೆಂದು ವಸಂತರಾಜನಂ ॥ ೪೪

ಬಂದೆಳಮಾವೆ ಚಿತ್ತಜನ ಬೀಡಿನೊಳಾವುದು ರಾಜವಾರ್ತೆ ಕಾ
ಮಂ ದಯೆಗೆಟ್ಟು ಕಾಮುಕಜನಕ್ಕುಱೆ ಜರ್ವಿ ವಸಂತರಾಜ ಕೊ ।
ಲ್ಲೆಂದುಱೆ ದಂಡುವೇಟ್ಟನದುವಲ್ಲದೆ ಮನ್ಮಥಚಕ್ರವರ್ತಿಯೆ
ಯ್ತಂದಪನಿಂದು ನಾಳೆ ಬದುಕಿಲ್ಲ ವಿಯೋಗಿಗೆ ಪಂಕಜಾನನೇ ॥ ೪೫

ಅಲರ್ದೊಂಗಲ್ಗಳೆ ನೂಪುರಂಗಳೆನಿಸಲ್ ಪಾಂಗಾಯೆ ಮಾಂಗಾಯವೊಲ್
ಪೊಳೆಯಲ್ ಕೆಂದಳಿರೆಂಬ ಕೆಂಜೆಡೆ ಮರಲ್ದಲ್ಲಾಡೆಯುಂ ಕೋಕಿಲಂ ।
ಗಳ ಹುಂಕಾರದೊಳಂ ತೊದಳ್ ನುಡಿಯುತುಂ ಮುದದಿಂದಮುದ್ಯಾನಲಕ್ಷ್ಮೀ
ಯೆಳಕಯ್ಯಿಂದೆಪೆತಂದ ಕಂದನವೊಲೇಂ ಚೆಲ್ವಾದುವಿಮ್ಮಾವುಗಳ್ (?) ॥ ೪೬

ಪುದಿದೆಳಗಾಯ್ ವಸಂತದ ಮೊದಲ್ ನೆರೆದೊಪ್ಪುವ ದೋರೆಗಾಯ್ ವಸಂ
ತದ ನಡು ಪಣ್ ವಸಂತದ ಸೆಱಂಗೆನೆ ತನ್ಮಯಮಪ್ಪಿನಂ ವಸಂ ।
ತದ [3]ಪುದಿದಾ[3]ದಿಮಧ್ಯಮವಸಾನಮೊಡಂಬಡೆ ತನ್ನೊಳಂ ವಸಂ
ತದೊಳಮಿದೇಂ ವಸಂತ[4]ದದಗುಂತಿಗೆ ಬಾಪ್ಪೊದಲಾಯ್ತೊ[4] ಮಾಮರಂ ॥ ೪೭
(ಶಾಂತಿಪುರಾಣಂ, ೭—೧೪೩.)

ಮಾವಿನ ಕೊನೆ ಮಾವಿನ ನನೆ
ಮಾವಿನ ಪೂ ಮಾವಿನೆಳೆಯ ಮಿಡಿ ಮಾವಿನ ಕಾಯ್ ।
ಮಾವಿನ ಪಣ್ಣಿಂದೆ ಜನಂ
ಭಾವಿಸೆ ಸರ್ವಾಂಗಸೌಂದರಂ ಮಾವೆಲ್ಲಂ ॥ ೪೮
(ಕಾವ್ಯಾವಲೋಕನಂ, ೪೮೭.)

ಕೋರಕಜಾಲದಿಂದೆಸೆದು ಕೆಂದಳಿರೇಱ ಮಡಲ್ತು ಕೂಡೆ ಕಾ
ಯ್ತಾರಮನಕ್ಕಮಿಾ ಮಱೆಯ ಬಲ್ಮಿಡಿಯಾಗಿ ಪಸುರ್ಪುಗೆಟ್ಟು ಕಾಯ್ ।

---

[1] ಕ (ಕ). [2] ಡೆಲಸತ್ (ಕ.ಖ.ಬ). [3] ನಿಮಿರ್ದಾ (ಅ). [4] ದೊಳಗಾಡಿಯ ಪೊಲಾಯಿತು ಬಂದ (ಕ.ಖ.ಬ).

ದೋ॰ರೆಗಳಾಗೆ ದೋ॰ರೆಯಿನಿತುಂ ತನಿವಣ್ಣಳುವಾಗೆ ಮಾಮರಂ
ಪೌರಜನಕ್ಕೆ ಬೀಱುವುವು ಸತ್ಕವಿಯಂತೆ ರಸಾಯನಂಗಳಂ ॥ ೪೯

ತುಱುಗಿದುದೊಂದು ಕೊಂಬು ನನೆಯಿಂ ತಳಿರಿಂ ಪೆಱತೊಂದು ಕೊಂಬು ಸು
ತ್ತಿಱಿದುದು ತಳ್ತ ಬಲ್ಮಿಡಿಯ ಕಾಯ್ಗಳ ಗೊಂಚಲಿನೊಂದು ಕೊಂಬು ಪೂ ।
ತೊಱಗಿದುದೊಂದು ಮಾಮರದೊಳೊಂದೆಳಗೊಂಬದು ಕೂಡೆ ನಾಡೆ ಪ
ಣ್ತೊಱಗಿದುದೇನದಂಗಜ ಮಹೀಭುಜನಿರ್ಕೆಯ ಚಿತ್ರಶಾಲೆವೊಲ್ ॥ ೫೦

ಉಗುರೊತ್ತಿಂ ಸೋ॰ರ್ವ ಸೊರ್ಕುಂಗೊನರ ಸೊನೆಗೆಯೇ॰ವೈಸಿ ಬಾಯ್ಧಾ[ರೆಯಂ ತಾ
ಳುಗೆ ಮುಟ್ಟುತ್ತಿ॰ಂಟಿ ಬಾಯಂ ತೆಱೆದು ಪರಭೃತಂ ಕಾಯ್ದು ಕಿಟ್ಕೊಂಬಿ[ನೊಳ್ ಕೈ ।
ಮಿಗೆ ಪೊಕ್ಕುರ್ವೇ॰ಪೆ ತುಪ್ಪುಟ್ ಮಡಗೆದಱಿ ಕುಳಿರ್ ಪೋ॰ಪುಗಿಲ್ ಪೋ॰ಪು[ಗಿಲ್‌ಪೋ॰
ಪುಗಿಲೆಂದಿಮ್ಮಾವಿನೊಳ್ ಕಣ್ಮಲೆದುದುಲಿದು ತನ್ನಿಚ್ಚೆಯಿಂದನ್ಯಪುಷ್ಟಂ ॥ * ೫೧

(ಅನಂತನಾಥಪುರಾಣಂ, ೬–೭೩.)

ಸೊನೆವನಿ ಚುಂಚುವಿಂ ಪನಿಯೆ ಮಾಂಗೊನರಂ ನ[1]ಲಿ[1]ಗರ್ಚಿ ಸೊರ್ಕಿನಿಂ
ತನು ದಳವೇ॰ಱೆ ಕಂಠವಿವರಂ ತೊವರೇ॰[2]ಱೆ[2] ಪಟುತ್ವವೇ॰ಱೆ ಕಾ ।
ಮನ ನನೆಯಂಬುಗಳ್ ವಿರಹಿವೃಂದದ ಮೆಲ್ಲೆರ್ದೆಯಂ ಪುಗಲ್ ನಿಜ
ಧ್ವನಿ ಬಗೆಯಂ ಪುಗಲ್ ಬಿಡೆ ಪುಗಲ್ ಪುಗಲೆಂದುದು ಕೋ॰ಕಿಲವ್ರಜಂ ॥ ೫೨

(ಜಗನ್ನಾಥವಿಜಯಂ, ೧೪–೩೮.)

ಪ್ರಣವೋ॰ತ್ಥಶ್ರುತಿಮಧುರ
ಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ।
ಪೆಣೆದಿರೆ ಪುರೋ॰ಹಿತಬ್ರಾ
ಹ್ಮಣನೆನಿಸಿತ್ತತನುನೃಪತಿಗೀ॰ ಪರಪುಷ್ಟಂ ॥ † ೫೩

(ಚಂದ್ರಪ್ರಭಪುರಾಣಂ. ೭–೮೮.)

ತನಿವಣ್ಣಿಂ ಮಾರುತಾಂದೋ॰ಳ[3]ದಿನೊ[3]ಸರ್ವ ರಸಾಸಾರಮಂ ದೂರದಿಂಭೋ॰ಂ
ಕನೆ ಕಂಡೆಯ್ತಂದು ಕಂಠಂ ನಿಮಿರ್ವಮರ್ದಿನಂತೆ ಪಕ್ಷದ್ವಯಂ ಜೋ॰ಲೆ ಕಣ್ ವಿಾ।

---

* ಈ ಪದ್ಯವು (ಖ.ಬ.) ಪ್ರತಿಗಳಲ್ಲಿಲ್ಲ; (ಕ) ಪ್ರತಿಯಲ್ಲಿ ಬಹಳ ಸ್ಖಾಲಿತ್ಯವಿದೆ.
[1] ಸು (ಅ.) [2] ಱು (ಅ). † ಈ ಪದ್ಯವು (ಕ) ಪ್ರತಿಯಲ್ಲಿಲ್ಲ. [3] ದೊಳೊ (ಕ.ಖ.ಬ).

ಲನದೊಳ್ ಸಮ್ಮೇಳನಂಬೆತ್ತಿರೆ [1]ತನಿರಸಮಂ ಪೀರ್ದುರ್ ಪೀರ್ದಾರ್ದುರ್[1] ಕಿಪ್ಗೊಂ
ಬಿನೊಳಡ್ಡಂ ಮೆಟ್ಟಿ [2]ತೆ[2]ಟ್ಟುಂದೆಱೆಯೆ ಗಱಿಪಿದತ್ತಾಮ್ರತುಂಡಂ ॥

(ಚಂದ್ರಪ್ರಭಪುರಾಣಂ, ೭–೮೭.)

ಅಳಿ ಗಿಳಿ ಕೋಗಿಲೆ [3]ಕರ್ದುಕಿದೊ
ಡೆ[3]ಳವೆಱೆಯಂ[4]ಕುಶಮನಗ್ರ[4]ಪಲ್ಲವದೆಡೆಯೊಳ್ ।
ಕೊಳಿಸಿ ಬಸಂ[5]ತನ[5] ಬರವಿಂ
ಗೆಳಮಾವಿನ ಗಜಮನಿಟಿದು ಸರಿದಂ ಶಿಶಿರಂ ॥ ೫೫

(ಅನಂತನಾಥಪುರಾಣಂ, ೬–೮೧.)

ಕನಗಾರ್ಯಂ ಕಚ್ಚಿ ಮೆಯ್ಯೊಕ್ಕರಿಸಿರೆ ಸೊನೆಯಂ ಮೊಕ್ಕಳಂ ಕಚ್ಚಿ ಕಿಱ್ರಿಂದೆನುತುಂ ಕಿಪ್ಗೊಂಬಿನಿಂಬಂ ಬಿಸುಟು ತುರಿಪದಿಂ ಲಂಘನಂಗೆಯ್ದು ಮೇಲ್ಗೊಂಬಿನ ಪಣ್ಣಂ ಚಂಚುವಿಂ ಪೀರ್ದೊಸರ್ವ ರಸಮನೊಲ್ದಂದದಿಂದೀಂಟಿ ಕೈಮಿಕ್ಕೆನಸುಂ ಕೈಗಣ್ಮಿ ತೆಟ್ಟುಂದೆಱೆದು ಗಱಿಪಿದತ್ತಾಮ್ರತುಂಡಂ॥ ೫೬

ಸಯ್ಗೊಂಬಿನ ತಳಿರ್ವುದುವಿನ
ಮಯ್ಗರೆದಿರೆ ಗಿಳಿಯು ಶಿಶುಗೆ ಪಣ್ಗಳ ರಸದಿಂ ।
ಬಾಯ್ಗಿಣ್ಣಲಾಗಿ ಮಾಣದೆ
ತಾಯ್ಗಿಳಿ ತಂದೆಱೆದುದೊಂದು ಚೂತದ್ರುಮದೊಳ್ ॥ ೫೭

ಗಿಳಿಯ ಹಸುಗೂಸು ಮಾವಿನ
ಸೆಳೆಗೊಂಬಿನ ತಳಿರ ತೊಟ್ಟಿಲೊಳಗೞುತಿರೆ ಕಂ ।
ಡಳಿನಿವಹಮಟ್ಕೞಿಂ ಜೋ
ಗುಳಮಂ ಪಾಡಿದುವು ತೂಗಿದುದು ಗಂಧವಹಂ ॥ ೫೮

ಮಳಯಾನಿಲನಿಂದಲುಗುವ
ಸೆಳೆಗೊಂಬಿನ ಪಣ್ಣನಂತುಮಿಂತುಂ ಕರ್ದುಕ ।
ಲ್ಕೆಳವಳಿಪರಗಿಳಿ ಪೋಲ್ತುದು
ಮುಳಿದೋಪಳ ವದನಚುಂಬನೋತ್ಸುಕ ವಿಟನಂ ॥ ೫೯

ಪಸರಿ[6]ಸಿ[6] ಚೂತ ಕಟ್ಟು ಗುಡಿಯಂ ಪೊಸಮಲ್ಲಿಗೆಗಾಯ್ತು ನೂತನ
ಪ್ರಸವವಿಭೂತಿ ನಿನ್ನರಸಿಗಂ[7]ದುಱು ಪೇೞ್ದು[7]ಪೊಲತ್ತಣಿಂದೆ ಬಂ ।

---

[1] ತಣಿವಿನೆಗಂ ಪೀರ್ದುರ್ ಮೆಯ್ವೆರ್ಚಿರ್ (ಅ). [2] ತ (ಕ.ಖ.ಬ). [3] ಕರೆದೊಡೆಎ (ಅ). [4] ಕುಶವದಗ್ರ (ಅ), ಕುಸುಮವಗ್ರ (ಖ.ಬ). [5] ತಂ (ಖ.ಬ). [6] ಸು (ಅ). [7] ದೆಡೆವೇಳ್ವ (ಅ).

ದೊಸೆದಳಿಕಾಂತೆ [1]ಪೇೞ್ ಸೆಳೆದುಕೊಂಡು[1] ನವೀನದಳೋತ್ತರೀಯಮಂ
ಪೊಸಯಿಸಿ ಸೂಱೆಗೊಂಡುದಲರ್ಗಂಪುಗಳಂ ಸಹಕಾರಕಾಂತನಾ ॥ ೬೦
(ಲೀಲಾವತಿ, ೯–೧೦೩.)

ಮುಳಿದುಬಿದೋಪರಳ್ಕಿರ್ದ ಪುಗುಳ್ತಿರಿವಂತೆ ಮುಗುಳ್ತು [2]ನಾಣ ಜಾ[2]
ಣೊಳಗೆ ಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾ[3]ಡಿ[3] ಪೊ ।
ಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳ್[4]ಲರ್ವಿ[4]ರಿವಂತೆ ಕಂಪು ಕೈ
ಕೊಳೆ ಬರಿದತ್ತು ತುಂಬಿ ನೆರೆವಲ್ಲಿಗೆ [5]ಮು[5]ಲ್ಲಿಗೆ ಸಂತೆಯಂತೆವೊಲ್ ॥ ೬೧
(ಅನಂತನಾಥಪುರಾಣಂ, ೬–೮೪.)

ಪಸುರೊಳಸೋರೆ ಬೆಳ್ಪು ಬಳೆಯುತ್ತಿರೆ ತೆಂಕಣಗಾಳಿಯಿಂ ಸಡಿ
ಲ್ವಸು [6]ಪೋರೆಯಾಗೆ[6] ಸಂಜನಿತ ಕಾಮಶಿಳೀಮುಖಪಾತದಿಂ ರಸಂ ।
ಪೊಸತು ಪೊದಟ್ದು ಪೊಣ್ಮೆ ವಿರಹಾತುರೆಯಂತೆವೊಲೇಂ ಸುಗಂಧನಿ
ಶ್ವಸಿತಮನೆತ್ತಿತೋ ಬಿರಿದ ಮಲ್ಲಿಗೆ ಬಂದ ಬಸಂತಮಾಸದೊಳ್ ॥ ೬೨
(ಲೀಲಾವತಿ, ೯–೧೦೫.)

ಕುಸುಮಕುಳಕ್ಕೆ [7]ನಿನ್ನರಸೆ[7] ನಿನ್ನ ವಿಳಾಸಮೆ ನಿನ್ನ ಚೆಲ್ವೆ ನಿ ।
ನ್ನೆಸಕಮೆ ನಿನ್ನ [8]ಸ್ಮೈಪೆ[8] ಮಧುಲಕ್ಷ್ಮಿ[9]ಯುವಾ[9]ಮಲಯಾನಿಲೇಂದುಗಳ್
[10]ಪಸರಿಕೆ[10] ನಿನ್ನ ಸೌರಭ[11]ದಿ[11]ನೆಂದಭಿಷೇಕಪುರಸ್ಸರಂ ಸ್ಮರಂ
ನಸು ಬಿರಿದಿರ್ದ ಮಲ್ಲಿಗೆಗೆ ಕಟ್ಟಿದ[12]ನೊಲ್ದಧಿರಾಜ[12]ಪಟ್ಟಮಂ ॥ ೬೩
(ಶಾಂತಿಪುರಾಣಂ, ೭–೧೪೨.)

ಪರೆಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತೆಂಬೆಲರ್
ಪೊರೆ[13]ವೊರೆಯಂ ಸಡಿಲ್ಚೆ[13] ನಡು ಪೊಂಗಿರೆ ಮಲ್ಲಿಗೆಗಳ್ ಬಸಂತದೊಳ್ ।
ಬಿರಿದೊಡೆ ನಲ್ಲರಂ ನೆನೆದ ನಲ್ಲರ ಮೆಲ್ಲೆರ್ದೆಗಳ್ [14]ನಿರಂತರಂ[14]
ಬಿರಿ[15]ವುವವೆಂ[15]ತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ ॥ ೬೪
(ಪಂಪಭಾರತಂ, ೫–೩೩.)

ಬನದ ವಿಭೂತಿ ತಂಬೆಲರ ಮೆಯ್ಸಿರಿ ತುಂಬಿಯ ಗೀತಶಾಲೆ ಚೈ
ತ್ರನ ತೊಡವೋತಗಲ್ದರೆರ್ದೆದಲ್ಲಣಮೋಪರ ಸ್ಮೈಪು ಕಾಮನಂ ।

---

1 ಯೇಂ ಸೆಳೆದುದೊಂದೆ (ಅ). 2 ಸಂದನಾ (ಅ.) 3 ಡೆ (ಕ.ಖ.ಬ). 4 ಳಲ್ವು (ಕ.ಖ.ಬ). 5 ವ (ಖ), ಯ (ಬ). ಪೋಱೆಯಾಗಿ (ಕ.ಖ.ಬ.ಗ). 7 ನೀನರಸಿ (ಕ.ಖ.ಬ). 8 ಸಲ್ಗೆ (ಅ). 9 ಯೊಳಾ (ಅ). 10 ಪೊಸಯಿಸೆ (ಅ). 11 ಮ (ಅ). 12 ನಂಕದರಾಜ್ಯ (ಅ). 13 ಪೊಳೆಯಿಂ ಸಡಿಲ್ಚ (ಖ.ಬ). 14 ಬಸಂತದೊಳ್ (ಅ). 15 ದುವದೆಂ (ಅ).

ಬಿನ ಕಣೆ ಪುಷ್ಪಸಾಯಕನ ಕೀರ್ತಿಯ ಬಿಟ್ಟು ಮೊದಲ್ ಮೃಡಾರಿವೀ
ರನ ಜಯಶಕ್ತಿ[1]ಯಂತೆ[1]ಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ ॥ ೬೫

(ಜಗನ್ನಾಥವಿಜಯಂ, ೧೪–೭೦.)

ಅರಲ ಸರಲ್ ಸರಲ್ಗಡೆಸೆವಿಕ್ಷುಧನುರ್ಲತೆ ಬಿಲ್ಗಡಲ್ಲಿಯುಂ
ತಿರು ಗಡ ಪದ್ಮಸೂತ್ರಮೆಸೆವಂ ಗಡ ತಾನುಮನಂಗನೆಂದುಮಿಾ ।
ಪರಿ ಪರಿಹಾಸ್ಯವಾಡಿಮೆನುತುಂ ನಗೆಯೊಳ್ ಪೊರೆಯೋಗಿ ಬಿಚ್ಚತಂ
ಬಿರಿವವೊಲಂತದೇಂ ಬಿರಿದುದೋ ಪೊಸಮಲ್ಲಿಗೆಗಳ್ ಬಸಂತದೊಳ್ ॥ ೬೬

ಬಲ್ಲಹನಾದನುರ್ವಿಗೆ ಬಸಂತನವಂಗೆ ಸಹಾಯನಾತನಿಂ
ಮಲ್ಲಿಗೆಗಾದುದಗ್ರಮಹಿಷೀಪದವಿಂ ಪೆಱತಾವುದೆಲ್ಲಿಯುಂ ।
ಮಲ್ಲಿಗೆಯಾಣೆ ಮಲ್ಲಿಗೆಯ ಘೋಷಣೆಯೆಂದು ಕಡಂಗಿ ನಲ್ಲರ
ಲ್ಲಲ್ಲಿಯೆ ಸೂಡಿ ನೋಡಿ ನಡೆ ಸೌರಭದಿಂ ದಳವೇಱ ಸೊಕ್ಕುವರ್ ॥ ೬೭

ಪೊಸ ಸಿರಿಗಂಧದೊಳ್ ತೊಡೆದು ಕರ್ಪುರದೊಳ್ ಪು[2]ಳಿ[2]ಗರ್ಚಿ ಕೂಡೆ ಬೆ
ಳ್ಪೆಸೆಯೆ ಹಿಮಾನಿಳಂ ತೆಗೆಯೆ ಪೂರ್ಣನಿಶಾಕರನೆಂಬ ಸಾಣೆಯೊಳ್ ।
ಕುಸುಮಶರಂಗೆ ಜಾಣ್ ನೆಱೆಯಲೆಂದು ವಸಂತಕನೆಂಬ ಕಮ್ಮಱಂ
ಮಸೆದಲಗೆಂಬಿನಂತೆಸೆಯುತಿರ್ದುವು ಮಲ್ಲಿಗೆಗಳ್ ಬಸಂತದೊಳ್ ॥ ೬೮

ಚಳಕಿಗೆಯಾದುವಾವವಱ ಬಲ್ಮುಗುಳಾವವಱಗ್ರಪಲ್ಲವಾ
ವಳಿ ಮುಡಿಯೊಳ್ ತೊಡರ್ಚೆ ರತಿಗೊಪ್ಪಮನಿತ್ತುವು ಪುಷ್ಪವಲ್ಲಿಯುಂ ।
ಫಳತರುವುಂ ದಿಟಕ್ಕೆ ಪೆಱತಾವುದೊ ಮಲ್ಲಿಗೆ ಚೂತಮೆಂದೆ ಕಂ
ಗಳ ಪಸವೋಡುವನ್ನಮೆಮೆಯಿಕ್ಕದವಂ ಮಧು ನಿಂದು ನೋಡಿದಂ ॥ ೬೯

(ಮಲ್ಲಿನಾಥಪುರಾಣಂ, ೫–೨೫.)

ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ ಪುಂಸ್ಕೋ
ಕಿಳನಾದಂ ವೇದಮಂತ್ರಂ ಕುಡಿ ಗುಡಿ ಮಧು ಮೌಹೂರ್ತಿಕಂ ಪೂತವಲ್ಲೀ ।
ಕುಳಮೆಲ್ಲಂ ನಿಬ್ಬಣಂಬಂದಬಲೆಯರೆನೆ ಚೂತಂಗಮಿಾ ಮಲ್ಲಿಕಾಕೋ
ಮಳೆಗಂ ಕೊಂಡಾಡಿ ಕೈನೀರೆಱೆದನತನು ಲಾವಣ್ಯಪುಣ್ಯಾಂಬುವಿಂದಂ ॥ ೭೦

(ಮಲ್ಲಿನಾಥಪುರಾಣಂ, ೬–೪೪.)

ಇದು ಧಾತ್ರೀಪಾರಿಜಾತಂ ಸಕಲಸುಕವಿವೃಂದಪ್ರಣೂತಂ ವಸಂತಾ
ಭ್ಯುದಯಪ್ರೀತಂ ಮನೋಭೂನೃಪವಿಜಯರಥಖ್ಯಾ[3]ತ[3]ಸೂತಂ ವನಶ್ರೀ ।

---

[1] ಯೆಂದ (ಅ). [2] ಡಿ (ಖ.ಬ). [3] ತಿ (ಕ.ಖ.ಬ).

ಸುದತೀಪ್ರೇಮಾತ್ಮಜಾತಂ ಫಲತರುವರವೃಂದಾರ[1]ಕೋದ್ಯದ್ಯು[1]ಪೇತಂ
ಮದಭೃಂಗೀಗೀತ[2]ಗೀ[2]ತಂ ಕೃತವಿರಹಿವಿಘಾತಂ ದಲೀ ಬಾಲಚೂತಂ ‖ ೭೧
(ಚಂದ್ರಪ್ರಭಪುರಾಣಂ, ೭–೯೦.)

ರತಿಮದನಂ ವಸಂತಸಮಯಂ ಪುಳಿನಂ ನಳಿನಂ ಕೊಳಂ ಹಿಮ
ದ್ಯುತಿಲತೆ ಮಾವು ಕೀರಕಳಭಂ ಕಳಕಂಠರವಂ ರಥಾಂಗದಂ ।
ಪತಿ ತಳಿರುಯ್ಯಲೋಪರ ಸುಸಿಲ್ ನನೆ[3]ವಿಲ್ ನನೆಯಂಬು ಮಂದ[3]ಮಾ
ರುತ ನಳಿನೀನಿನಾದಮಿವಱಿಂ ಪೊಸಮಲ್ಲಿಗೆಗಕ್ಕೆ ಮಂಗಳಂ ‖ ೭೨
(ಮಲ್ಲಿನಾಥಪುರಾಣಂ, ೬–೪೭.)

ಜನಸಮ್ಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು ಪುಷ್ಪಂಗಳು
ಳ್ಳನಿತುಂ ನೋಂತ[4]ವೆ[4] ತನ್ನ ಕೀಡೆಸಟ ಸೌಭಾಗ್ಯಕ್ಕೆ[5]ನಿಪ್ಪಗ್ಗದೀ[5] ।
ವನದೇವೀ[6]ಸಖಿಗೀ[6] ವಸಂತವಿಜಯಶ್ರೀದೇವಿಗೀ ಚೂತರಾ
ಜನ ಮಾದೇವಿಗೆ ಮಲ್ಲಿಕಾರಮ[7]ಣಿ[7]ಗಂ ಭದ್ರಂ ಶುಭಂ ಮಂಗಳಂ ‖ ೭೩
(ಮಲ್ಲಿನಾಥಪುರಾಣಂ, ೬–೫೧.)

ಮುರಿದ ತೊಡಂಬೆಯೊಳ್ ಮೊ[8]ಗ[8]ಸಿ ತೋರ್ಪ ಪಸುರ್ನನೆ [9]ನಾಡೆ[9] ಬೆ
ಳ್ಕರಿಸಿದ ಮೊಗ್ಗೆ ಕೂಡೆ ಬಿಳಿದಾದ ಮುಗುಳ್ ಪೊರೆವೋದ ಕುಟ್ಮಳಂ ।
ಬಿರಿದಲರೆಂಬಿವಂ ತಿಱಿದು ಮಲ್ಲಿಗೆಯೊಳ್ ಶರಪಂ[10]ಚಕಂ[10]ಗಳಂ
ವಿರಚಿ[11]ಸಿ[11] ಪಂಚಬಾಣವೆಸರಂ [12]ಪಡೆ[12]ದಂ ಮದನಂ ಬಸಂತದೊಳ್ ‖ ೭೪
(ಮಲ್ಲಿನಾಥಪುರಾಣಂ, ೬–೪೭.)

ಅಸದಳಮಾದ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ
ದೆಸಗುವ ಗಾಳಿ ಗಂಧವಹನಾದುದು ಮಾಗಿಯ ಪೋಗು ಕಾಲ್ಪುರಂ ।
ಮಸಗುವ ಮಲ್ಲಿಕಾಮಧುವಿನಿಂ ಮಧುಮಾಸಮುಮಾಯ್ತು ಕೈದುವಂ
ಪೊಸಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದನಂಗಜಂ ‖ ೭೫
(ಮಲ್ಲಿನಾಥಪುರಾಣಂ, ೬–೪೮.)

ಸುರಭಿಸಮೀರಣಂಬೆರಸು ಬೇಗದೆ ಬಂದಲರ್ಗಣ್ಣ ಸನ್ನೆಯಿಂ
ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ ।

---

[1] ಕತ್ವಾಭ್ಯು (ಅ). [2] ನೂ (ಖ.ಬ). [3] ಯಂಬುಗಳಿಂದ ಬಂದ (ಖ.ಬ). [4] ದೆ (ಕ.ಖ.ಬ). [5] ತನ್ನೇಪ್ಟೆಯಿಂ (ಖ.ಬ). [6] ಸುಖದೀ (ಖ.ಬ). [7] ಣ (ಕ.ಖ.ಗ.ಬ). [8] ನ (ಅ). [9] ಮೇಗೆ (ಅ). [10] ಜರಂ (ಕ.ಖ.ಬ). [11] ಸೆ (ಕ.ಖ.ಬ). [12] ತಳೆ (ಅ).

ಪರವಧುವಂ ವಿನೀಳಪರಿಧಾನಮನಾಕೆ ಮಧುಪ್ರಸಂಗಕಾ
ತರೆ ಮುಸುಕಿಟ್ಟವೋಲ್ ಮುಸುಱಿ ಪೀರ್ದುವು ಸೌರಭಮಂ ಮದಾಳಿಗಳ್ ॥ ೭೬
(ಮಲ್ಲಿನಾಥಪುರಾಣಂ, ೬–೪೧.)

ಬಿರಿಮುಗುಳೊಳ್ ಮುಸುಂ[1]ಬ[1]ನಲೆದೊಯ್ಯನೆ ಕರ್ಣಿಕೆಯಂ ಕರ್ದುಂಕಿ ಕೇ
ಸರಮನೆಱಂಕೆ[2]ಯಿಂ[2] ಕೆದಱಿ ಬಂಡನುರಂಬರಮುಂಡು ತಳ್ತಿಸಱ್ ।
ಪೊರೆಯೊಳಡಂಗಿ ನುಣ್ಚರದಿನಾಣತಿಮಾಡಿದುದುನ್ಮದಾಳಿ ತಾ
ವರೆಯೊಳಗಿರ್ಪ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ ॥ ೭೭
(ಮಲ್ಲಿನಾಥಪುರಾಣಂ, ೬–೯೯.)

ಸರಸಪಲಾಶಪುಷ್ಪಚಯದೊಳ್ ವನಲಕ್ಷ್ಮಿಯ ರತ್ನನೂಪುರ
ಸ್ವರಮೆನೆ ಮಲ್ಲಿಕಾಮುಕುಳದೊಳ್ ರತಿಕಾಂತನ ಬಾಣಭೀಂಕೃತ ।
ಸ್ವರಮೆನೆ ಹೇಮತಾಮರಸದೊಳ್ ಜಲದೇವಿಯ ವಕ್ತ್ರಕೂಜಿತ
ಸ್ವರಮೆನೆ ಪೊಣ್ಮಿದತ್ತು ಮಧುರಂ ಮಧುಮತ್ತಮಧುವ್ರತಸ್ವನಂ ॥ ೭೮

ರಾಗದೆ ಕೂಡೆ ಝೇಂಕರಿಸಿ ಪುಷ್ಪರಸಂಗಳನುಂಡು ಸೊರ್ಕಿ ಬೆಂ
ಡಾಗಿ ತಳಿರ್ಗಳೊಳ್ ಕೆಡೆದು ಪೂಮರನಂ ಮುಸುಕಿಟ್ಟು ಜೋಗುಳಂ ।
ತೂಗಿಯರಲ್ಗೆ ಬಂದು ನೆಗೆವಂಬರದೊಳ್ ವನಲಕ್ಷ್ಮಿಗೆತ್ತಿಯಿಂ
ಮೇಗೆ ಮನೋಜನೆತ್ತಿಸಿದ ಪೀಲಿಯ ಸತ್ತಿಗೆವೊಲ್ ಮದಾಳಿಗಳ್ ॥ ೭೯

ಎತ್ತಂಗೋಲಂ ವಿರಹಿಗೆ
ಚಿತ್ತಭವಂ ತೊಟ್ಟನಿಕ್ಕಿದಂತಿರೆ ಬನದಿಂ ।
[3][ದೆತ್ತಿ][3] ಗಗನಕ್ಕೆ [4][ಪಾಱು][4]ವು
ವೆತ್ತಂ ಮಧುಮತ್ತಚಿತ್ತ ಷಟ್ಚರಣಂಗಳ್ ॥ ೮೦

ವಿರಹಿಗಳಿತ್ತ ಸಾರದಿರಿ ತಣ್ಣೆಲರೀ ಬನಮೆಲ್ಲ ಮನ್ಮಥಂ
ಗಿರಲಿದೆ ದುರ್ಗ ಮಾಮರನೆ ಡೆಂಕಣಿ ಕಾಯ್ದುರಿಯೆಣ್ಣೆ ಕೆಂದಳಿ ।
ರ್ವರಿಯೆಳಮಾಳೆ ದಳ್ಳಿಸುವಶೋಕೆ ಧನುರ್ವಸಿತೇಕ್ಷುದಂಡ ಷ
ಟ್ಚರಣದ ನಾಳಿಗೋಲೆನುತ ಕೋಗಿಲೆ ಸಾಱಿ ಬಸಂತಮಾಸದೊಳ್ (?) ॥ ೮೧

ಮಗುಳ್ದುಂ ಮಗುಳ್ದು ಪೊಸಮ
ಲ್ಲಿಗೆಯರಲಂ ಸಿರಿಯ ದೇಸೆಯಂ ಕಂದರ್ಪಂ ।

---

[1] ಕ (ಖ.ಬ). [2] ಯೊಳ್ (ಖ.ಬ). [3] ದಿತ್ತು (ಕ.ಖ.ಬ). [4] ಸಾರು (ಕ.ಖ.ಬ).

ಪೊಗೞ್ದಂ ರತಿಗಂ ತಂಗಾ
ಳಿಗಮಳಿಗಂ ಗಿಳಿಗಮಿಂದುಗಂ ಕೋಗಿಲೆಗಂ ॥ ೮೨

ಮೊದಲೊಳ್ ತಂಬೆಲರ್ಗಾನೆ ಬೋದಣಿಗೆಗಂಪಂ ಬೀಱಿದೆಂ ಸುಗ್ಗಿ ಬ
ರ್ಪುದು[1]ಮೀ[1] ನಂದನಕಾನೆ ಮುಂದು[2]ಗೆಡೆದೆಂ[2] ಪುಷ್ಪೇಷುಗಂ ಪುಷ್ಪಬಾ ।
ಣದ ಮುಂಗಾ[3]ಣ್ಕೆಯನಿತ್ತೆ[3]ನಾನೆ ಪೆೞ[4]ವೆ[4]ನ್ನಂತಾದುವೇ ಮ್ಯೆಮೆಗಾ
ಸ್ಪದಮೆಂಬಂತೆವೊಲಾಯ್ತು ಮಾಧವಿ ಮದಾಳಿಧ್ವಾನಸಂತಾನದಿಂ ॥ ೮೩
(ಜಗನ್ನಾಥವಿಜಯಂ, ೧೪–೬೩.)

ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂದೆ ಬಂದು ನೀ
ನೆನಗೆ ವಸಂತನಾಗಮನಮಂ ನೆಱೆ ಸೂಚಿಸಿಕೊಟ್ಟೆಯೆಂದು ನಂ ।
ದನವನಲಕ್ಷ್ಮಿ ಕೀರರವದಿಂ ಪೊಗೞ್ದಿತ್ತ ಪಸಾಯದಚ್ಚಮು
ತ್ತಿನ ಪೊಸಪಚ್ಚವಂ ತಳೆದವೋಲದಿರ್ಮುತ್ತೆ ಮುಗುಳ್ತುದೆತ್ತಲುಂ ॥ ೮೪
(ಚಂದ್ರಪ್ರಭಪುರಾಣಂ, ೭–೪೧.)

ಮಲಯಮರುಚ್ಚಮೂಪತಿಗರಲ್ಗಳ ಸೌರಭದಂಗಚಿತ್ತಮಂ
ಕಲಪಿಕನಾಯಕರ್ಗೆ ಪೊಸಮಾಂಗೊನರಂಗಡಿಸೂಱೆಯಂ ಶುಕಾ ।
ವಳಿಯ ಪದಾತಿಗಿತ್ತು ತನಿವಣ್ಗಳ ಪೊಟ್ಟಣಮಂ ವಸಂತನ
ಗ್ಗಳಿಕೆಗೆ ಬಂದು ಸಂವರಣೆದೋಱಿ ಮನಂಬಡೆದಂ ಮನೋಜ[5]ನಾ[5] ॥ ೮೫
(ಅನಂತನಾಥಪುರಾಣಂ, ೬–೮೫.)

ಹರನುರಿಗ[6]ಣ್ಗೆ ನೀಂ[6] ಸೊನೆಯ ಸೋನೆಯನಾಗಿಸು ಚೂತ ಕಂಠದೊಳ್
ಗರಳದ ಕರ್ಪನೊತ್ತಿ ಕಳೆ ಚಂದ್ರ[7]ಮ[7] ಪೂಸಿದ ಬೂದಿ ಪಾ[8]ಱಿ[8] ಮ್ಯೆ ।
[9]ಕರಲಿಡೆ ಬೀಸು[9] ಗಂಧವಹ ಕೆಂದಳಿ[10]ರೊಂದಲಗಿಂ[10] ಕಪರ್ದಿಯೊಳ್
ಬೆರಸು ಬಟಿಕ್ಕೆ ನೀನೆನುತೆ ನೋಡಿದನಂಗಭವಂ ವಸಂತನಂ ॥ ೮೬
(ಅನಂತನಾಥಪುರಾಣಂ, ೬–೮೭.)

ಬಂದಪನಿಂದು ನಾಳೆ ಮದನಂ ವನಕೇಳಿಗೆ ರಾಜಕೀರ ಮಾ
ಕಂದದ ಕಾಪು ನಿನ್ನದು ಮದಾಳಿಯೆ ಪೂಗಳ ಕಾಪು ನಿನ್ನದೆ ।
ೞ್ತಂದಿರು ಬಾಗಿಲೊಳ್ ಪಿಕ ಸರೋವರಮಂ ಕಳಹಂಸ ಕಾಪುಗೊಳ್
ವಂದಿಸಿ ಗಂಧವಾಹ ಕೊಳಲೆಂದು ನಿಯಾಮಿಸಿದಂ ವಸಂತಕಂ ॥ ೮೭

---

1 ನೀ (ಅ). 2 ದೆಗೆದಂ (ಅ). 3 ಣ್ಕೆಗೊಟ್ಟೆ (ಅ). 4 ತೆ (ಅ). 5 ನಂ (ಖ.ಬ). 6 ಣ್ಣಿನಿಂ (ಕ.ಖ.ಬ). 7 ನ (ಅ). 8 ಱಿ (ಅ). 9 ಮಱೆವಡೆಸುತ್ತ (ಅ), ಮಱೆದೊಡೆ ಬೀಸು (ಕ.ಖ.ಬ). 10 ರ್ದೊಂಗಲನೀಂ (ಕ.ಖ.ಬ).

## ವೈಶಾಖವರ್ಣನಂ

ವನಜ[1]ಲ[1]ಕೇಳಿಗಿಂಬುಗುಡುವಂತೆ ಪಗಲ್ ಪಿರಿದಾದುದೊಯ್ಯನೊ
ಯ್ಯನೆ ಕಿಱಿದಾದುದಂದಿನಿರುಳಾಱಿಸುವಂತಿನನಿಂದ[2]ಗಲ್ದ[2] ಪ ।
ದ್ಮಿನಿಯ ನಿರೋಧಮುಂ ಶಿಶಿರನಿಂ ಮುಳಿದಿಟ್ಟಪಸವ್ಯಗಂಧವಾ
ಹನ ಕರಚಕ್ರದಂತೆ ಬಡಗ[3]ಲ್ ನಡೆದ[3]ತ್ತು ಹಿಮಾಂಶುಮಂಡಲಂ ॥ ೮೮

(ಅನಂತನಾಥಪುರಾಣಂ, ೬-೮೯.)

ಇನಿತಾನುಂ ಮೃಗತೃಷ್ಣೆಯಂ ಪಡೆಯುತುಂ ದಿಗ್ಭಾಗದೊಳ್ ತಳ್ತು ಕಾ
ನನದೊಳ್ ಬೇಗೆಯನಿಕ್ಕುತುಂ ಕದಡುತುಂ ನೀರ್ದಾಣಮಾದಂತುಟಂ ।
ಬಿನ[4]ದಂ ತ[4]ಪ್ಪೆಡೆಯೊಳ್ ತೆರಳ್ಚಿ ತೊವಲಂ ತಂದಿಕ್ಕುತುಂ ಬೇಂಟೆಗಾ
ಱನವೋಲ್ ಬೇಸಗೆ ಬಂದು ಪೊಕ್ಕು [5]ಕವಿದತ್ತೆತ್ತಂ ಮಹೀಭಾಗಮಂ[5] ॥ ೮೯

ಪಾವಸೆಯಾಗಿ ಪೋಯ್ತು ನಗನಿರ್ಝರಣಂ ತೊಱೆಗಳ್ ಪದಘ್ನಮಾ
ಯ್ತಾವಗಮೀಕ್ಷಿಸಲ್ಕೆ ಕೆಸಱಾಯ್ತು ಕೊಳಂ ಕೆಱೆ ಬತ್ತಿಪೋದುವಿ ।
ರ್ಪಾವೆಡೆಯೆಂಬಿನಂ ಬಱತು ಬೀಟೆಯನಾಳ್ದುದು ಬೆಂಚೆ ದೂರ ಪೆ
ರ್ಬಾವಿಯೊಱಂತೆ ತೋಡುವಿನೆಗಂ ತಳ್[6]ಕೋಡಿದು[6]ದಾ ನಿದಾಘದೊಳ್ ॥ ೯೦

ತನುಪಂಕಾಗ್ರಮುಹುರ್ಲುಠಚ್ಛಫರಮಾಬದ್ಧಾಶ್ಮಸಂಧ್ಯಂತರಾ
ಳನಿವಿಷ್ಟೋರುಕುಳೀರಕಂ ತಳ್[7]ನದೀ[7]ನಿರ್ಮಗ್ನಕೂರ್ಮಂ ಚಿರಾ ।
ಭ್ಯನುಸಂಧಾನವಿ[8]ಲೀನ[8]ದೀನಮುಖ[9]ಹಂ[9]ಸಂ ಮ್ಲಾನ[10]ಕಲ್ಹಾರ[10]ಕೋ
ಕನದಂ ಕಣ್ಗಿ[11]ಳಿ[11]ದಾಯ್ತು ತತ್ಸಮಯದೊಳ್ ಶುಷ್ಯತ್ಸರಸ್ಸಂಚಯಂ ॥ ೯೧

(ಚಂದ್ರಪ್ರಭಪುರಾಣಂ, ೯-೮೨.)

ಬೆಟ್ಟದ ಕಲ್ಲ ಸಂದಿಯೊಳಗೊಯ್ಯನೆ ಪೊಣ್ಮುವ ನಿರ್ಝರಕ್ಕೆ ಕ
ಯ್ಯಿಟ್ಟು ಪಿಪಾಸೆಯಿಂದ ಅ[12]ರೆಮೀಲಿತಲೋಚನನಾದ ದಂತಿಯಂ ।
ತೊಟ್ಟನೆ ಮುಟ್ಟೆ ಕಂಡದಱ ಮೈನೆಟಲಾಸೆಗೆ ಜಾತಿವೈರಮಂ
ಬಿಟ್ಟೊಳಪೊಕ್ಕು ಪಟ್ಟಿತು ಬಿಸಿಲ್ಗಿದೊಂದು ಗಜಾರಿ ಬಿಚ್ಚತಂ ॥ ೯೨

---

[1] ದ (ಕ.ಖ). [2] ದಗ್ಧ (ಖ.ಬ). [3] ಲ್ಲಡರ್ದ (ಗ.ಖ). [4] ದಕ್ಕ (ಗ.ಘ). [5] ದುಮದೆತ್ತೆತ್ತಂ ದಿಶಾಭಾಗದೊಳ್ (ಖ.ಗ). [6] ಪೋದುದು (ಕ), ಕೋಯ್ತುಡಿ (ಖ.ಬ). [7] ತಟೀ (ಅ). [8] ನಾಶ (ಅ). [9] ಹಾ (ಕ.ಖ.ಗ ಪ.ಬ). [10] ಕಾಹ್ಲಾದ (ಕ.ಖ.ಬ). [11] ನಿ (ಕ.ಖ.ಗ.ಘ.ಬ). [12] ರ (ಕ), ಡ (ಖ.ಬ).

ಬಟ್ಟೆಯ ಪಳ್ಳದೊಳ್ ಪಲವೊೞಂತೆಗಳಾದುವು ಕಾಡೊ[1]ಳಿರ್ದ[1] ಕಾ
ಲ್ವಟ್ಟೆಗಳೆಲ್ಲಮೆ[2]ಯ್ದುವುವು[2] ನೀರ್ನೆಲೆಯಂ [3]ಪೞವಾೞು[3]ಬಾವಿಯೊಳ್ ।
ಪುಟ್ಟಿದ ಸೊಪ್ಪು ಪೇೞ್ದುದು ಜಲೋದಯ[4]ಲೋ[4]ಭಮನೆತ್ತಿ ಪೊತ್ತು ಡೋ
ಣಿಟ್ಟು ದನಕ್ಕೆ ನೀರೆಱೆವ ಸಂಭ್ರಮಮುಣ್ಮಿದುದೂರ ಪಕ್ಕದೊಳ್ ॥ ೯೩

ಕಾನನಮುರಿದುದು ರವಿಕಾಂ
ತಾನಳನಿಂ ನಗದ ಶಿಖರವೊಡೆದುದು [5]ಸಿಡಿಲ್ದು[5] ।
ತ್ತಾನೆಯ ತಲೆ ಬಿರಿದುದು ಮು
ಕ್ತಾನೀಕಂ ತೋಱೆ ಬೆಟ್ಟಬೇಸಗೆ ಬಿಸಿಲೊಳ್ ॥ ೯೪

ಬಿರಿಯದ ಬೆಟ್ಟಮಿಲ್ಲ ಮೞಲಾಗದ ಪೆರ್ದೊಱೆಯಿಲ್ಲ ಬೆಂದೊಗಲ್
ಪೊರೆವೊರೆಯೆರ್ದುರ್ದ ಸಾಯದ ಮೃಗವ್ರಜಮಿಲ್ಲ ಬಿದಿರ್ ತಗುಳ್ದು ಮಾ ।
ಱೊರಸಿದ ಕಿಚ್ಚಿನಿಂದಡಸಿ ಬೇಯದ ಕಾನನಮಿಲ್ಲ ತೃಷ್ಣೆಯಿಂ
ದುರುಳದ ಪಾಂಥರಿಲ್ಲ ವಿಷಮಾರ್ಕಕರೌಘದೊಳಾ ನಿದಾಘದೊಳ್ ॥ ೯೫

ವಿಸರದ್ದಾವಾಗ್ನಿಜಿಹ್ವಾಕಬಳಿತಲತಿಕಾನೋಕಹಶ್ರೇಣಿ ನಿರ್ನೀ
ರಸರಸ್ಸಂತಪ್ತಪಂಕಾಕುಲಿತಕಮಠಪಾಠೀನಸಂತಾನಮತ್ಯು ।
ಗ್ರಸಮೀರಾಘಾತಜಾತಸ್ಫುರದವನಿರಜಃಸ್ಪರ್ಶದುರ್ದರ್ಶಮುರ್ವೀ
ರಸಪಾನೋತ್ತಾನಭಾನುದ್ಯುತಿಯೆನಲೆಸೆದತ್ತಸ್ತಮೇಘಂ ನಿದಾಘಂ ॥ ೯೬

ಸುರರಾಜಂ ಬೞಿಯುಟ್ಟಲಾತುರಿಸುವಂ ಮೇಘಕ್ಕೆ ಕಾಯ್ದುಕ್ಕಿ ಸಾ
ಗರದಿಂ ಪೋಗಲೊಡರ್ಚುವಂ ವರುಣನುಗ್ರಂ [6]ವ್ಯಗ್ರ[6]ನಾತ್ಮೀಯಭೂ ।
ಧರದಿಂದಂ ಹಿಮವನ್ನಗಕ್ಕೆಳಸುವಂ ಪಿಂಗಂ [7]ವಟ[7]ಚ್ಛಾಯೆಯಿಂ
ಹರಿಣಾಂಕಂ ಭುವನಕ್ಕದೇಂ ಭಯದಮಾಯ್ತೋ ಘೋರ ಘರ್ಮಾಗಮಂ ॥

[8]ಕೂರ್ಪೇಱಿದ[8] ಕಡುವಿಸಿಲ ಪೊ
ಡರ್ಪಿಂಗಿೞಿದಂತೆ ತೀರತರುಗಳ್ ತರದಿಂ ।
ಮಾರ್ಪೊರ್ಳೆವ ನೆವದಿ ನೀರ್ವೊ
ಕ್ಕಿಪುರ್ವದೇಂ ಪಿರಿದೊ ಭುವನಭೀಷ್ಮಂ ಗ್ರೀಷ್ಮಂ ॥ ೯೮

ನಟ್ಟನಡುವಗಲ ಬಿಸಿಲುರಿ
ಯಿೞ್ತೊಡೆ ಸುಟ್ಟಪ್ಪುದೆಂಬವೊಲ್ ಪಸರಿಪುದಂ ।

---

[1] ಳೆೞ್ದ (ಗ.ಘ). [2] ಯ್ದುರದು (ಗ.ಘ). [3] ಪಾಳ್ಬಾವಿ (ಕ.ಖ.ಬ). [4] ಲಾ (ಗ.ಘ). [5] ಸೀಳ್ದು (ಖ.ಬ). [6] ಪ್ರಜ್ಞ (ಅ.ಕ.ಬ). [7] ತಟಿ (ಗ.ಘ) [8] ತೂಪಿಱಿದ (ಕ).

ಬಿಟ್ಟುಡುಗಿಯೊಂದೆ ಮೆಯ್ಯಂ
ಮೆಟ್ಟಿರ್ಪವೊಲಿರ್ಪುವಂದು ತಾಟ ನೆಟಲ್ಗಳ್ ॥ ೯೯

ಪಾಱುವ ಪಕ್ಕಿ ಕೋಡ ಗೞಿ ಸೀಯ್ಯದವಿಲ್ಲೆಲೆಯಿಕ್ಕಿ ಪೆರ್ಮರಂ
ತಾಱದವಿಲ್ಲರಣ್ಯಮೃಗಯೂಥದ ಬೆನ್ [1]ಪುಳಿಚೆರ್ದು[1] ಬಾಯ್ಗಳಿ ।
ಪೆರ್ಱದವಿಲ್ಲ ಬಿ[2]ಜ್ಜ್ಹೊ[2]ಡೆದು ಪಾಱದವಿಲ್ಲ ಪಯೋಧಿ ತಾಯ್ಮಣಲ್
ತೋಱದವಿಲ್ಲದೇಂ ಪ್ರಳಯಕಾಲವೊ ತೀವ್ರನಿದಾಘಕಾಲವೋ ॥ ೧೦೦

ಕುಲಗಿರಿ ಕಾಯ್ದು ಕರ್ಬುನದ ಬೆಟ್ಟುವೊಲಿರ್ದುವು ಧಾತ್ರಿ ಕಾದ ಕಾ
ವಲಿಯವೊಲಿರ್ದುದಂಬುನಿಧಿ ದಿಬ್ಬೆಗೆ ಕಾಸಿದ ತೈಲದಂದದಿಂ ।
ತಲೆದಳೆದುಕ್ಕುತಿರ್ದುವು ದಿಶಾವಿವರಂ ಸಲೆ ಕಾಱುಗಾಱಿನ
ಟ್ಜ್ಹೊಲೆಯವೊಲಿರ್ದುವೇಂ ಪ್ರಳಯಕಾಲವೊ ತೀವ್ರನಿದಾಘಕಾಲವೋ ॥ ೧೦೧

ಒಲೆಗಲ್ವೊಲ್ ಕಾಯ್ದುವೆಂಟುಂ ದಿಗಿಭದ ಬಿದುಗಳ್ ಕಾಯ್ದು ಕರ್ಬೊನ್ನ ಪೆರ್ಗಾ
ವಲಿ[3]ವೋಲಾಯ್ತ್ತು[3] ನೆಲಂ [4]ಸಂ[4]ಪಳೆಯನೆಱೆದವೋಲ್ ಕಾಯ್ದು
ಚುಯ್ಯೆಂದುವೇೞುಂ ।
ಕುಲಪಾರಾವಾರಮೀ ಬೇಸಗೆಯ ಬಿಸಿಲೊಳಿನ್ನೆಂದಿ[5]ದೇ[5]ಕಾರ್ಣವಂ ಭೂ
[6]ತಳಮಕ್ಕುಂ ಪೇೞೆನಲ್ ಪರ್ವಿದು[6]ದತಿಶ[7]ಯಿತ[7]ಗ್ಲಾನಿದಾಘಂ ನಿದಾಘಂ ॥
(ಜಗನ್ನಾಥವಿಜಯಂ, ೭೧–೭೩.)

ರಸದಾಳಿಂಬದ ಪಣ್ಣ ಬಿತ್ತು ಬಿರುಕಿಂ ತೋರ್ಪಂತೆಯುರ್ಬೆಟ್ಟಿ ಪೆ
ರ್ಬಿಸಿಲಿಂದಿರ್ಬಗಿಯಾದ ಮಸ್ತಕದೊಳಾ ಸದ್ರಕ್ತಮುಕ್ತಾಳಿಗಳ್ ।
ನಸುದೋಱುತ್ತಿರೆ ನೆಮ್ಮಿ ಪೆರ್ಮರನನೊಂದಂ ಕಣ್ಗಳಂ ಮುಚ್ಚಿ ಮೂ
ರ್ಛಿಸಿದಂತಿರ್ದುದು ದಂತವೇಷ್ಟಿತಕರಂ ಮತ್ತೊಂದು ಮತ್ತದ್ವಿಪಂ ॥ ೧೦೩

ಬಿಸಿ[8]ಲಳುರೆ[8] ಬಿರಿದ ಬಿದುವಿಂ
ನಸುದೋಱುವ ರಕ್ತ[9]ಸಿಕ್ತ[9] ಮುಕ್ತಾಫಳಮಂ ।
ರಸದಾಳಿಂಬದ ಬಿತ್ತೆಂ
ದೊಸೆದು ಕರ್ದುಂಕುವುವು ಶುಕಕುಳಂ [10]ಮದ[10]ಗಜದಾ॥ ೧೦೪
(ಜಗನ್ನಾಥವಿಜಯಂ, ೧೬–೬೯.)

---

[1] ಫುಳಿಲೆರ್ದು (ಕ), ಪ್ಲುಣೆಲೆರ್ದು (ಖ.ಬ), ಪುಣೆಚೆರ್ದು (ಫ). [2] ದ್ರೊ (ಖ.ಬ), ಟ್ಜ್ಹೊ (ಗ.ಫ). [3] ಯೊಲ್ಕಾಯಿದತ್ತೀ (ಕ), ಯೊಲ್ಕಾಯ್ತು (ಖ.ಬ). [4] ಸಿಂ (ಅ). [5] ಗೇ (ಖ.ಬ). [6] ತಳಮಕ್ಕುಂ ಪೇೞದೆಂಬವೋಲುರ್ಬಿದುದ (ಕ), ತಳಕಂಪೇೞೆಂಬ ವೋಲುರ್ಬಿದುದ (ಖ.ಬ). [7] ಯಃದ (ಅ), ಯಿಕ (ಖ.ಬ). [8] ಲೊಳರೆ (ಖ.ಬ). [9] ಯುಕ್ತ (ಖ ಬ). [10] ವನ (ಖ.ಬ).

ರದನಂ ಚುಱ್ರಿಂಬಿನಂ ಕಾಯ್ದೊದೆದು [1]ಬಿರಿಸಿಗಾಲ್ವೀಡಿರಿರ್ದಿ[1]ರ್ಪ ಸೊಪ್ಪಾ
ಱಿದ ಬಾಯಂ ಬಿಟ್ಟು ಬಕ್ಕಂಬಯಲನುದಕವೆಂದೂಡಿ ಕುಂಭಸ್ಥಲಂ ತೀ ।
ವಿದ ಮುಕ್ತಾಜಾಲಕಂ [2]ಬಿಬ್ಬರನೆ[2] ಬಿರಿದರ[3]ಲ್ವೋಗೆ[3] ಸ್ಯೈತಾದ ಮಧ್ಯಾ
ಹ್ನದೊೞಿರ್ದತ್ತೊಂದದುದ್ಯದ್ಘನಕರಿ ದರಿಯಂ ನೆಮ್ಮಿ ಘರ್ಮಾಂಬುವಿಂದಂ (?) ॥

ಪಱು ಬೇಗೆವೋಗೆ ತನ್ನಯ
ನೆಱ[4]ಲಂ[4] ಬೇಱೊಂದುಗೆತ್ತು ಸಾರ್ವಳಿಪಿಂ[5]ದಂ[5] ।
[6]ಸುಟಿದೆಡಕಂ ಬಲಕಂ ಬಸ[6]
ವಱಿದುದು ಬೇಸಗೆಯ ಬಿಸಿಲೊಳೊಂದಿಭಕಳಭಂ ॥ ೧೦೭

(ಚಂದ್ರಪ್ರಭಪುರಾಣಂ, ೯–೭೪.)

ಅಱಿಯದರವಿಂದದಲರಂ
ಪಱಿದುದ ನೆವಮಿಟ್ಟು ಸುಟ್ಟಪಂ ರವಿಯೆನುತುಂ ।
ಮಱುಗಿ ಮೊಱೆಯಿಡುವ ತೆಱದಿಂ
ಮುಱಿದೆತ್ತಿದುದಗ್ರಕರದಿನಿಭವೆಳದಳಿರಂ ॥ ೧೦೮

ಭಾನುಕರೋಷ್ಣದಿಂದೊಡೆದು ಕೊಂಬು ಶಿರಂ ಬಿರಿಕೇಱೆ ತೋರ್ಕೆವೆ
ತ್ತಾನನದೊಳ್ಪು ಬಲ್ಪಱಿಯೆ ಬೆಂಗಡಿ[7]ವಂ ಕಿ[7]ಱುಪೀಡೆವೀಱೆ ನ
ಟ್ಟಾನಿಸಿದಂತೆ ಕಾಲ್ಗಳಿರೆ ಕಾಡಱಿದೇವ[8]ರ[8] ನೋಂಪಿಗಿಟ್ಟ ಮ
ಣ್ಣಾನೆಯ ಮಾಱ್ಕೆಯಿಂ ಮಿಡುಕದಿರ್ದುದು ದಂತಿ ನಿದಾಘಕಾಲದೊಳ್ ॥ ೧೦೯

ಗಂಟಲುರಂಬರಂ ಬಱತು ಗೋಣ್ಣೆಱಲ್ ಕಡುಸೇದೆಯಿಂದೆ ಮ್ಯೊ
ಕಂಟಣಿಸುತ್ತೆ ಕೋಡ ಗಱಿ ಸೀದು ಮುರುಂಟಿ ವಿಹಂಗಸಂಕುಲಂ ।
ಗೆಂಟಱೊಳೊಂದಿ ತಾಱಿದ ಮರಂಗಳ ತೂಱಲುಗೊಂಬುಗೊಂಬಿನೊಳ್
ಸುಂಟಗೆಗೋದ ಮಾಱ್ಕೆಯವೋಲಿರ್ದುವು[9][ಡುಂ][9]ಗಿ ನಿದಾಘಕಾಲದೊಳ್ ॥ *

[10]ಅಡೆವೊ[10]ತ್ತುವ ಬೇಸಗೆಯೊಳ್
ಪೆಡೆವಣಿ ಬಿಡೆ ಕಾಯ್ದು ನೆತ್ತಿ ಛಿಟಿಛಿಟಿಲೆನುತುಂ ।
ನಡೆಗೊಳ್ಳಿಯಂತೆ ನಡೆದುದು
ಗಿಡುಗಳ ನೆಱಲಾಸೆಗಹಿಪ ನಸುವಿಡುತುಸಿರಂ ॥ ೧೧೦

---

[1] ಸ್ಯೆಗಾಲ್ಪಿಡಿದಿರ್ಪ (ಕ). [2] ಬಿಕ್ಕನೆ (ಕ). [3] ಲ್ದೊಗೆ (ಕ). [4] ಲನೆ (ಅ). [5] ಡಂ (ಬ). [6] ಸುಟಿಸುಟಿದೆಡಬಲಕಂಬಲ (ಖ.ಬ). [7] ವಕ್ಕಿ (ಬ). [8] ತೆ (ಕ). [9] ಡೂ (ಕ.ಖ.ಬ). * ಈ ಪದ್ಯ (ಕ) ಪ್ರತಿಯಲ್ಲಿಲ್ಲ. [10] ಡಿಯೊ (ಕ.ಖ.ಬ).

ಪೆಡೆಯ ಮೊದಲ್ಗೆ [1]ತಂದ[1]ಡರೆ ಮಂಡಳಿಸಿತ್ತಹಿ [2]ಕಾಯಮೆಲ್ಲಮಂ[2]
ಕೊಡೆವಿಡಿ[3]ದಂ[3]ತರಲ್ಚಿದುದು ಸೋಗೆಯನೋವದೆ ಸೋಗೆ ಪೀರ್ದುದೋ ।
ಗಡಿಸದೆ [4]ಸೋ[4]ರ್ವ ನಾಲಗೆಯ ಬಿಂದುವನಂದೆರ್ದೆಯಾಱಿ ಸಿಂಗಮಂ
ತುಡುಗದದೇನಲಭ್ಯತರವೋ ನೆಟಲುಂ ಜಳಮುಂ ನಿದಾಘದೊಳ್ ॥ ೧೧೧

(ಚಂದ್ರಪ್ರಭಪುರಾಣಂ, ೯-೮೦.)

ಉಱೆ ಕಾಯ್ದ ಸೂರ್ಯರಶ್ಮಿಗೆ
ಮೊಱೆಯಿಡಲೆಂದೆತ್ತಿ ಪಿಡಿದ ತೊವಲೆಂಬಿನೆಗಂ ।
ತುಱುಗಿರ್ದಾವರೆಗೊಂಬಂ
ಮುಱಿದು ನೆಟಲ್ಮಾಡಿಕೊಂಡು ನಡೆವರ್ ಪಥಿಕರ್ ॥ ೧೧೨

(ಜಗನ್ನಾಥವಿಜಯಂ, ೧೭-೭೧.)

ಉರಿವ ನಿದಾಘದಾಘದೊಳೆ ಮೇರುನಗಂ ಪೊರೆವೋಗಿ ಸುತ್ತಲುಂ
ಕರಗಿ ಬಟಿಕ್ಕಳಾವಳಯದೆಣ್ದೆಸೆಗಂ ನೆಱೆ ಸೂಸಿ ಕಾಟ್ಪುರಂ ।
ಬರಿದು ಬಿಲಸ್ಥಲಂಗಳೊಳಪೊಕ್ಕು ಟಿದಿರ್ದುದವಲ್ಲದಂದು ಪೇೞ್
ಜರಗಿನ ಪೊಂಗಮೀ ನೆಲಕವಾವುದೊ ಸಂಗತಿವೆತ್ತಕಾರಣಂ ॥ ೧೧೩

(ಚಂದ್ರಪ್ರಭಪುರಾಣಂ, ೯-೭೦.)

ನೆತ್ತಿಯೊಳಾವಗಂ ತಳೆದ ಬಾಂದೊಱೆ ವಾಣದೆ [5]ನಿಲ್ತೆ[5] ಚೂಡನೊಳ್
ಪತ್ತಿಸಿದಾ ಹಿಮಾಂಶುಕಳೆಯಪ್ಪಿದ ಹೈಮವತೀಲತಾಂಗವೊ ।
ಪ್ಪುತ್ತಿರೆಯುಂ ಪೊದಟ್ಬುರಿವ ಬೇಸಗೆ[6]ಗೊರ್ಮೆಯೆ[6] ವೆರ್ಚೆ [7]ರೌಪ್ಯ[7]ಭೂ
ಭೃತ್ತಟನಂದನಾವಳಿಯ ತ[8]ಣ್ಣೆಟ[8]ಲಂ ಬಿಡ[9]ನೊರ್ಮೆ[9]ಯುಂ ಮೃಡಂ ॥

(ಚಂದ್ರಪ್ರಭಪುರಾಣಂ, ೯-೮೧.)

ಹಿಮಕರನಂ ತುಱುಂಬಿ ಹಿಮವಾರಿಯ ಗಂಗೆಯನಿಟ್ಟು ಜೂಟದೊಳ್
ಹಿಮಗಿರಿಪುತ್ರಿಯಂ ಮುದದಿನಪ್ಪಿ ಹಿಮಾಂಗದ ನಾಗಮಂಡನೌ ।
ಘಮನೊಸೆದಾಂತು ತಾಪಹರ[10]ನಪ್ಪುದ[10]ನೀಶನುದರ್ಕದರ್ಶಿ ಮು
ನ್ನಮೆ ಸಮಕಟ್ಟಿ [11]ನಿಂದ[11]ನೆನೆ ಬೇಸಗೆ ಬೇಸಱಿಸಿತ್ತು ಲೋಕಮಂ ॥ ೧೧೫

(ಜಗನ್ನಾಥವಿಜಯಂ, ೧೭-೭೭.)

---

[1] ಕಂಡ (ಕ.ಖ.ಬ). [2] ಶೇಷಕಾಯಮಂ (ಅ). [3] ವಂ (ಕ.ಖ.ಬ). [4] ಪೀ (ಖ.ಬ). [5] ಭಾಳ (ಅ). [6] ಯುಮ್ಮೆಗೆ (ಅ). [7] ಧೂರಿ (ಕ.ಖ.ಬ). [8] ಣ್ಬಟಿ (ಅ). [9] ನಾಡೆ (ಖ.ಬ). [10] ನೊಪ್ಪುವ (ಅ). [11] ಕೊಂಡ (ಅ).

ಜಲನಿಧಿತಲ್ಪನುಂ ಜಲರುಹೋದರನುಂ ಜಲಜಾತನೇತ್ರನುಂ
ಜಲಧಿಸುತೇಶನುಂ ಜಲದವರ್ಣನುಮೆಂಬುದನೀ ನಿದಾಘಮಂ ।
ಕಳೆಯಲೆ ಪಣ್ಣಿಕೊಂಡನಸುರಾರಿವೊಲಾವನನಾಗತಜ್ಞನೆಂ
ದಿಳೆ ನುಡಿವಂತು ಪೆರ್ಚಿಸಿಲನುರ್ಚಿಸಿತುರ್ಚಿ ನಿದಾಘಮುರ್ಚಿಯೊಳ್ ॥ ೧೧೬

(ಜಗನ್ನಾಥವಿಜಯಂ, ೧೭–೭೬.)

ಅಳುರ್ವ ನಿದಾಘ[1]ದಿಂ[1] ತ್ರಿಭುವನಂ ನೆಱೆ ನಿರ್ಜಲಮಾದೊ[2]ಡಂ[2] ಕಮಂ
ಡಳುಜಳಶೀತದಿಂ ತೃಷೆಯನಾಱಿಪೆನೆಂದರವಿಂದಜಂ ಕಮಂ ।
ಡಳುವಿನೊಳಂದು ಬಯ್ತು ಪಿಡಿದಾ ಜಲಮಿಂದುಪಕಾರಿಯಾಯ್ತು[3]ನಲ್[3]
ತಿಳಿದೆನಿದೊಂದ[4]ನೆಂದೊಡೆ[4] ನಿದಾಘದ ದಾ[5]ಘಮನೇನ ಬಣ್ಣಿ[5]ಪೆಂ ॥ ೧೧೭

(ಜಗನ್ನಾಥವಿಜಯಂ, ೧೭–೭೫.)

ಸುರಪಂ ನೇತ್ರವ್ರಜವ್ಯಾಜದೆ ಕುಮುದದಳಶ್ಲಿಷ್ಟನಾದಂ ನಿದಾಘಾ
ತುರದಿಂದಬ್ಧಿಸ್ಥನಾದಂ ಶಿಖಿ ಯಮುನಗಲಂ ಛಾಯೆಯಿಂದಂ ತಮಿಸ್ರಾ ।
ಚರನಾದಂ ರಾಕ್ಷಸಂ ಪಾಶಕರನುದಧಿಯಂ ಪೊರ್ದಿದಂ ಮಾರುತಂ ತಂ
ಬೆರಲಾದಂ ಕಿನ್ನರೇಶಂ ಹಿಮನಗಮನೆ ಸಾರ್ದಂ ಹರಂ ಗಂಗೆವೊತ್ತಂ ॥ ೧೧೮

ರವಿಕಾಂತೋಪಳವಹ್ನಿಯಿಂದಡವಿಗಳ್ ಭಸ್ಮಾವಶೇಷಂಗಳಾ
ದುವರಲ್ದೋದುವು ಬೆಟ್ಟುಗಳ್ ನದನದೀ ದ್ರೋಣೀಜಲಂ ಕಾಸಿದೆ ।
ಣ್ಣೆವೊಲು[6]ರ್ವೆ[6]ಟ್ಟುವು ಮೂಷೆಯಿಟ್ಟ ತೆಱದಿಂ ಗ್ರಾವಸ್ಥಲಂ ಲೋಹಮಾ
ದುವು ರೇಣುಸ್ಥಲಿ ಕಾಜುವಿಟ್ಟುವು ನಿದಾ[7]ಘದ್ರಾಘಿಮೋದ್ರೇಕದೊಳ್[7] ॥ ೧೧೯

(ರಾಮಚಂದ್ರಚರಿತಪುರಾಣಂ, ೭–೭೯.)

ಮೃಗಕುಳಮಾಸೆಗೆಯ್ದು ಮೃಗತೃಷ್ಣಿಕೆಯಂ ಜಲಮೆಂದು ತೃಷ್ಣೆಯಿಂ
ಪಗಲಿಟಿವನ್ನೆಗಂ ಪರಿದು ಗಂಟಲುರಂಬರಮಾಱಿ ಬೆಂದೊವಲ್ !
ತೆಗಳಿಗೆ ಬೀಪೆ ಬಾಯ್ಗೆ ಕ[8]ರಿ[8]ಸಂ ಬರೆ ನಾಲಗೆಗಿಟ್ಟು ನಟ್ಟದಿ
ಟ್ಟಿಗಳೊಡನಳ್ಳೆಪೊಯ್ಯೆ ನಡೆಗೆಟ್ಟವು ತೃಷ್ಣೆಯಿನಾರೊ ಬೇಯದರ್ ॥ ೧೨೦

(ರಾಮಚಂದ್ರಚರಿತಪುರಾಣಂ, ೭–೮೩.)

ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆವಂ ಮತ್ಸ್ಯಾವತಾರಕ್ಕಿನಂ
ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ ದೇವರ್ಕಳಾಗ್ನೇಯಮೆಂ ।

---

[1] ಮಂ ಖ.ಬ). [2] ಡೀ (ಅ). [3] ಲೇ (ಅ). [4] ನೆನ್ನದೋ (ಖ.ಬ). [5] ಹಮ ನೇನನೆಂದ (ಅ). [6] ರ್ಬೆರ್ದು (ಖ.ಬ). [7] ಘೋದ್ರೇಕದಿಂದಂ ಕರಂ (ಖ.ಬ). [8] ರು (ಖ.ಬ).

ದು ಹವಿರ್ಭಾಗಮನೊಲ್ಲದಿಂದುಕಲೆಯಂ ಕೊಳ್ವರ್ ಮೃಡಂ ಪಾರ್ವತೀ
ಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನಂದಾಲಿಂಗನಂ ಮಾಡುವಂ ॥ ೧೨೧

(ರಾಮಚಂದ್ರಚರಿತಪುರಾಣಂ, ೭-೯೮.)

ಹುತ್ತಿನೊಳುಬ್ಬೆಗೊಂಡು ಪೊಱಮಟ್ಟು ಪಗಲ್ ಬಿಸಿ[1]ಲಟ್ಟೆ[1] ಕೆಂಡಮಂ
ಪತ್ತಿಸಿದಂತೆ ಕಾಯ್ವು ಮಣಿಯಿಂ ಪೆಡೆ ಬೇಯೆ ಪೊದಟ್ಟು ಧೂ[2]ಳಿ[2]ಯೊಳ್ ।
ಪೊತ್ತಿದ ಧೂಳಿವಟ್ಟೆಯೊಳುರಂ ಪು[3]ಗು[3]ಳ್ದೆ ಪೋ[4]ರ[4]ಳ್ದು ಪೋಗಿ [5]ಪೊ
ಕ್ಕಿತ್ತಗಿ[5]ದೊಂದು ಪಾಟ ಪಟವಾವಿಯ ನೀರ್ದೆಗೆದಿರ್ದ ಬೀಡೆಯಂ ॥ ೧೨೨

ಅತಿತಪ್ತೋದ್ಧೃಪ್ತಧೂಳೀಪಿಹಿತಮಹಿತಳಂ [6]ತುಂಗ[6]ವಾತೂಳಿಕಾಲಿಂ
ಗಿತ ರೋದೋಮಂಡಲಂ ಪ್ರೋಚ್ಚಲಿತಮರುಮರೀ[7]ಚಿಪ್ರಜವ್ಯಾಪ್ತ[7]ದಿಕ್ಸಂ ।
ತತಿ ಬಂದತ್ತುರ್ವಿಗಂ ಬಗೆಗೆ ಪಡೆದಮೋಘಂ ಸಮುದ್ಧೂತ[8]ಮಾಘಂ[8]
ಹೃತನದ್ಯೌಘಂ ವಿಮೇಘಂ ಜನಿತಜನಮನೋಗ್ಲಾನಿದಾಘಂ ನಿದಾಘಂ ॥ ೧೨೩

(ಚಂದ್ರಪ್ರಭಪುರಾಣಂ, ೯-೭೫.)

ಅರ್ಕಾಂಶುವಿಂದೆ ಪಾಲ್ಗಡ
ಲುಕ್ಕಲ್ ನೀರ್ದಳಿಯಲುದಕಮಿಲ್ಲದೆ ಹರಿ ತಾಂ ।
ತಕ್ಕೈಸಿಕೊಂಡು ಪೋದಂ
ಪಕ್ಕೆಯನೆನಿಸಿತ್ತು ಲೋಕಭೀಷ್ಮಂ ಗ್ರೀಷ್ಮಂ ॥ ೧೨೪

ಹಿಮತಾಂಬೂಲೋರುರಾಗಾಧರಮುದ್ರೃಢನಿತಂಬಾಂಬರಂ ತಾಲವೃಂತೋ
ತ್ಥಮರುದ್ವ್ಯಸ್ತಾಲಕಂ [9]ನಿಸ್ಸೃ[9]ತಮಧುಲವಸಾ[10]ದ್ರೋರ್ದ್ಗ[10]ಮಾಲಂಬಿಕೇಶಂ ।
ವಿಮಲೋದ್ಯದ್ಯಂತ್ರಧಾರಾಜಲಕಲುಷಿತನೇತ್ರಾಂಜನಂ ಚಂದನಾಪಾಂ
ಡಿಮಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು ಬಾಲಾಕಳಾಪಂ ॥ ೧೨೫

(ಚಂದ್ರಪ್ರಭಪುರಾಣಂ, ೯-೮೨.)

ತುಱುಗಿ ನದೀನದಂಗಳ ಜಲಂಗಳೆ ಕಾ[11]ಯ್ದು[11]ಸರೆಣ್ಣೆಯಂದದಿಂ
ಬಱತವು ಮೀಂಗಳಟ್ಟು ತೆಱದಿಂ ಕುದಿಗೊಂಡುವು ನಾಗಲೋಕದಿಂ ।
ಪೊಱಮಡಲಾಸೆಗೆಯ್ದು ನಹಿನಾಯಕನಂಬುಧಿ ಬತ್ತೆ ಮಾಣಿಕಂ
ಮಿಱುಗಲದೊಂದು ಕೆಂಡದೊಲೆಯಿರ್ಪವೊಲಿರ್ದ[ನಹೀಶ]ನಾವಗಂ ॥ ೧೨೬

---

[1] ಲೆಳ್ವ (ಕ), ಲೇಳೆ (ಖ.ಬ). [2] ವೆ (ಕ). [3] ನ (ಕ), ರು (ಖ.ಬ). [4] ದ (ಖ.ಬ). [5] ತಾಂಪೊತ್ತನಿ (ಕ.ಖ.ಬ). [6] ತೂಲ (ಖ). [7] ಚೀಜಾಲ (ಅ). [8] ಮೋಹಂ (ಖ.ಬ). [9] ವಿಶ್ರು (ಖ.ಬ). [10] ದೋರ್ತ್ತ (ಕ.ಖ.ಖ). [11] ಯ್ವೆ (ಖ.ಬ).

ಸ್ಮರರಾಗಕ್ಕಂತರಾಯಂ ಜಲನಿಧಿಗೆರ್ದೆಗಿಚ್ಚೀಕ್ಷಣಕ್ಕಂಕುಶಂ ಹು
ಲ್ಲುರಿ ದಿಗ್ವ್ಯಾಳಕ್ಕೆ ಶೈಲಕ್ಕಶನಿ ಕರಗಸಂ ಹಸ್ತಿಮಸ್ತಕ್ಕೆ ಪಾಂಥ ।
ರ್ಗುರಿಗುಯ್ಯಲ್ ತಾರು[1]ಗು[1]ತ್ತಂ ತರುಗೆ ತಪನರಾಜೀಸಮೂಹಕ್ಕೆ ದಾಹ
ಜ್ವರಮತ್ಯುದ್ದಾಹಭೀಮಾತಪಮೆನಲುರಿದತ್ತಂದಿಳೌಘಂ ನಿದಾಘಂ ॥ ೧೨೭

ನದನದ್ಯೌಘಾಂಬುವಂ ಪೀರ್ದೆಳೆ ನೆಱೆಯದೆ ಬಾಯ್ಬಿಟ್ಟವೋಲ್ ಬೀಡೆಗಳ್ ಪ
ರ್ವಿದು[2]ವುಷ್ಣಾಂ[2]ಶುಪ್ರಭಾಮಂಡಲದ ಪುದುವಿನಿಂ ಬೆಂದವೋಲಾಗಸಂ ಕಂ
ದಿದುದಾದಂ ದಿಗ್ವಧೂಸಂತತಿಯೊದವಿದ ತಾಪಕ್ಕೆ ಮೆ[3]ಯ್ಯ್ಯಾನದಟ್ವಂ[3]
ದದ ಭೇರಿರಾವಮುರ್ವಿರ್ದುದು ದೆಸೆಗಳೊಳೇಂ ಗ್ರೀಷ್ಮಮಾದತ್ತೊ ಭೀಷ್ಮಂ ॥
(ಚಂದ್ರಪ್ರಭಪುರಾಣಂ, ೯—೬೬.)

ಜ್ವಲನೋಷ್ಮಗ್ರೀಷ್ಮತಾಪಕ್ಕಗಿದಡವಿಗಳೊಳ್ ಬ್ಯೆಗುವೊಟ್ಟಿಪ್ಪಿನಂ ಪ
ಲ್ವಲತಯ್ಯೋದ್ದೇಶಮಂ ಪೊರ್ದಿದುದಿರದೆ ಮುಹುಶ್ಶ್ಯಂಗನಿಸ್ತಾಡನ ಪ್ರೋ ।
ಚ್ಚಲಿತಾಂಭಶ್ಶೀಕರಂ ಸ್ಯೆರಿಭವಿಸರಮಗಾಧಸ್ರವಂತೀಹ್ರದಾಂತ
ರ್ಜಲದೊಳ್ ನಿಷ್ಕಂಪಿತಾಂಗಂ ಮುೞುಗಿದುದು ಬಹಿಃಪುಷ್ಕರಂ ಹಸ್ತಿಯೂಥಂ ॥
(ಚಂದ್ರಪ್ರಭಪುರಾಣಂ, ೯—೬೮.)

ಬಿಡದಿನ್ನುಂ ತನ್ನನೆಮ್ಮನ್ವಯದ ಗಜಮವೆಂಟುಂ ಕೊರಲ್ಗೊಂಡು ಪೊತ್ತಿ
ರ್ದೊಡಮೆಮ್ಮೊಳ್ ಕಾ[1]ಯ್ಪಿನಿಂ[4]ತೀಯುವನಿ [5]ಮೆ[5]ಱೆದಪಳ್ ಮಾಣದೆಂದೆಂದು
ಲ್ಗುಡುವಂತಾತ್ಮಾಗ್ರಹಸ್ತಂಗಳೊಳಿನಕಿರಣೋದ್ಭೀತಿಯಿಂ ಪಲ್ಲವಂಗ [ಪುಯ್ಯ।
ಳ್ವಿಡಿದುಗ್ರಗ್ರೀಷ್ಮದೊಳ್ ಸಾಮಜವಿತತಿ ತೊಟಲ್ದತ್ತು ವಾವಾರ್ಗಂಥೆಯಿಂದಂ ॥
(ಚಂದ್ರಪ್ರಭಪುರಾಣಂ, ೯—೬೯.)

ನಯನೌಘಚ್ಛಲದಿಂದೆ ನೈದಿಲೆಸಳಂ ಶಕ್ರಂ ಮುಸುಂಕಿಟ್ಟನೈ
ದೆ ಯಮಂ ಛಾಯೆಯನೊಂದಿನಿತ್ತಗಲದಿರ್ಪಂ ಪಾಶಹಸ್ತಂ ಪಯೋ ।
ಧಿಯನಾಶ್ರೈಸಿದನಾವಗಂ ತುಹಿನಭೂಮೀಧ್ರಕ್ಕೆ ಸಾರ್ದಂ ಹರ
ಪ್ರಿಯನಾವರ್ತಿಸೆ ತಳ್ತು ನಾಲ್ದೆಸೆಯುಮಂ ಗ್ರೀಷ್ಮಪ್ರತಾಪೋದಯಂ ॥ ೧೩೧
(ಚಂದ್ರಪ್ರಭಪುರಾಣಂ, ೯—೬೭.)

ಬೇಸಗೆಯ ಬಿಸಿಲೊಳಾ ಕೈ
ಲಾಸನಗಂ ನೆಱೆಯೆ ಕರಗಿ ಕ[6]ಣ್ಣೆ[6]ಟ್ಟು ಕರಂ ।

---

[1] ತು (ಖ.ಬ). [2] ವಶ್ಮಾಂ (ಖ.ಬ). [3] ಯ್ಯನ್ನದಳ್ವಂ (ಅ), ಯಾನರಳ್ವಂ (ಖ.ಬ). [4] ಯ್ವಳಿಂ (ಖ.ಬ). [5] ಮ (ಖ.ಬ). [6] ಣ್ಣ್ (ಅ).

ಸೂಸಿ ಪರಿದಪುದು ದೆಸೆಗೆನೆ
ಮಾಸರಮಾಗಿರ್ದುವೊಗೆದ ಮೃಗತೃಷ್ಣಿಕೆಗಳ್ ॥ ೧೩೨
(ಚಂದ್ರಪ್ರಭಪುರಾಣಂ, ೯–೭೧.)

ಬಿಸಿಲಳುರೆ ಕರಗಿ ಹರಿವ
ಶ್ಮಸಾರಮಂ ಗಿರಿಯ ನಿರ್ಝರಂಗೆತ್ತೀಂ ಚುಂ ।
ಬಿಸಿ ಚಂಚು ಬೇಯೆ ತಲೆ[1]ಬಿದಿ[1]
ರ್ದಸುವರೆಯಾದುದೊ ತೃಷಾರ್ತನೊಂದು ಮಯೂರಂ ॥ ೧೩೩
(ಚಂದ್ರಪ್ರಭಪುರಾಣಂ, ೯–೭೨.)

ಕಡುವಿಸಿಲ ಕಾಯ್ಪಿನಿಂ ಬಿ[2]ರಿ
ದೊ[2]ಡೆದುಗೆ ಬಿಸುಮುತ್ತು ಸೋರ್ವ ಸೀರ್ಪನಿಗೆತ್ತೊಂ ।
ದೆಡೆಮಡಗದೆ ನೋಣ್ದು ನವಿಲ್
ಮಿಡುಕಿದುದತಿತೃಷ್ಣೆಯೀಗು[3]ಮೆರ್ದಗದಪಟಲಂ[3] ॥ ೧೩೪
(ಚಂದ್ರಪ್ರಭಪುರಾಣಂ, ೯–೭೩.)

ಪರಿಪೂರ್ಣಗರ್ಭಭರದಿಂ
ಬರಲಾರದೆ ನಿಂದೊಡ್ಡೈದಿ ನದಿಯಂ ಜಲಮಂ ।
ಪಿರಿದೂಡಿ ಬಂದು ತೆಗೆತೆಗೆ
ದಿರದೆಱೆದುದು ಕರಣಿಯಿಂದೆ ಕರಿಣಿಗಿಭೇಂದ್ರಂ ॥ ೧೩೫
(ಚಂದ್ರಪ್ರಭಪುರಾಣಂ, ೯–೭೬.)

ಒದವಿದ ಬೆಟ್ಟಬೇಸಗೆಯ [4]ಕೂ[4]ರ್ವಿಸಿಲರ್ವಿಸೆ ಬೆರ್ಚಿ ವಾಯುವೇ
[5]ಗದೆ[5] ಹರಿಣಂ ಸಮು[6]ತ್ಪ್ಲುತ[6]ದಿನಿಂದುವ ಬಿಂಬಮನೋಡಿ ಪೊಕ್ಕು ಮ ।
ಧ್ಯದೊಳೊಸಱುತ್ತುಮಿರ್ಪ ಸುಧೆಗಂ ಕುಳಿರ್ವಾಲನೆಟಲ್ಗಮಲ್ಲಿ ಪೋ
ಗದೆ ನೆಲಸಿರ್ದುದಲ್ಲದೊಡದೆಲ್ಲಿಯದೇಣಶಶಾಂಕಸಂಗಮಂ ॥ ೧೩೬
(ಚಂದ್ರಪ್ರಭಪುರಾಣಂ, ೯–೭೭.)

ಬಿಸಿಲೊಳೆ ಬಿಬ್ಬರಂ ಬಿರಿದ ಮಸ್ತಕಶುಕ್ತಿ[7]ಕೆಯಿಂದೆ ಮುತ್ತು[7]ಮುಂ
ದೆಸೆ [8]ಕವಿತಂದೊಡಾಂತಿರುತೆ[8] ನೋವುಮನಿಂತಿದಪೂರ್ವತೋಯಭೃ ।
ದ್ವಿಸರದೆ ವಾಃಕಣಂಗಳುಗುತಂದಪುವೆಂದೆ ಪೊಡರ್ಪುಗೆಯ್ದು ಪೂ
ರಿಸುವಳಿ[9]ಪಿಂದೆ[9] ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ ॥ ೧೩೭
(ಚಂದ್ರಪ್ರಭಪುರಾಣಂ, ೯–೭೫.)

---

[1] ವಿಡಿ (ಖ.ಬ). [2] ದುಷ್ಪೊ (ಅ). [3] ಮಂತೆರ್ದಗಟಲಂ (ಖ.ಬ). [4] ಪ (ಕ.ಖ.ಬ). [5] ಱದ (ಅ). [6] ತ್ಪ್ಲಕ (ಕ.ಖ.ಬ). [7] ಯಮುತ್ತಿನಿಂದೆ (ಖ.ಬ). [8] ಗುರುದಂತರಂದುಱದೆ (ಖ.ಬ). [9] ಬಂಧ (ಖ.ಬ).

ನೀಱುಯರೆತ್ತಿ ತಂದೆಱುವ ತಣ್ಗ[1]ರಗಂ[1]ಗಳನಗ್ರನಾಳದಿಂ
ದೂಱುದ ಧಾರೆಯೊಡ್ಡಿದ ಕರಾಗ್ರದಿನಾನನದತ್ತ ತುಂತುಱಿಂ ।
ತೋಱು ಕೊರಲ್ ತಗುಳ್ದು ಮಿಡುಕಾಡೆ ವಿಲೋಚನವೊಯ್ಯನೇಱೆ ಮೆ
ಯ್ಯೂಱು ನಿಜೇಚ್ಛೆಯಿಂದುಸಿರ್ದು ನೀರ್ಗುಡಿವಂದಗದಿಂದವೊಪ್ಪುಗುಂ (?) ॥

ಪೂಸಿದ ಚಂದನಂ ಮುಡಿದ ಪಾದರಿ ತೊಟ್ಟೆಳಮುತ್ತು ಸುತ್ತಿನೊಳ್
ಮಾ[2]ಸ[2]ದ ತೆಂಗಿನೋಲೆ ಹದನಾಱದ ಬೆ[3]ಳ್ಮ[3]ಡಿ ಮೆಲ್ಲಪಚ್ಚೆನೀ ।
ರ್ವಾಸು ತಗುಳ್ದ ಗಂಜಣಿಯೊಳೊಂದಿದ ಬಾಳದ ಬೇರ ಚಪ್ಪರಂ
ಬೇಸಗೆ ಸಂದ ಭೋಗಿಗೆ ವಿಲಾಸದ ದೇಸೆಯನುಂಟುಮಾಡುಗುಂ ॥ * ೧೭೯

ಪೂಸುವ ಬೀಸುವ ಮಡಿಯಂ
ಪಾಸುವ ನೀರ್ಗುಡಿಯಲೆಱುವ ಕಿಚ್ಚ್ಗೈವೆಸದೊಳ್ ।
[4]ವಾಸಂತಂ[4] ವಿಟರ್ಗಾದುದು
ಬೇಸಗೆಗಾದುದು ಬೊಜಂಗತನಮಬಲೆಯರೊಳ್ ॥ ೧೮೦

ಮದನವಿಕಾರಮಂ ವಿರಚಿಪಲ್ಲಿಗೆ ಬೇಸಗೆ ಸೂಳೆಬಂಟನಾ
ದುದು ವಿಟರ್ಗಂಗನಾಜನದೊಳೆಂತೆನೆ ವಿಶ್ಲಥಮುತ್ತರೀಯಮಾ ।
ದುದು ಬಱತ[5]ತ್ತು[5] ಬಾಯ್ [6]ನಿಡುಪನಾ[6]ಳ್ದುದು ಸುಯ್ ನಿಮಿರುತ್ತು ಮುಣ್ಮಿ ಪೊ
ಣ್ಮಿದುದು ಪರಿಶ್ರಮಂ ತನುಗೆ ಸಂಗಳಿಸಿತ್ತು ನಿಜಪ್ರಸಂಗದಿಂ ॥ ೧೮೧

ಕ್ರಮುಸುಸ್ನಾತ[7]ಪ್ರಸಾಸ್ಯ[7]ದ್ವಿಚಕಿಳದಶನಂ ಪಾಟಲಾಶೀತಿಬಿಂದೂ
ದ್ಗಮದಿಂ ಮಂದಾರ್ಕತೇಜೋನಯನರುಚಿ ಸಮುತ್ಪಾತವಾತಂ ವಿಧೂ[[8]ನ್ವ
ದ್ದ್ರುಮಪಾದಂ][8] ಶಾಲ್ಮಲೀತೂಳಕಪರಿತವಪುಃಕೇಶಜಾಲಂ ನಿದಾಘಾಂ
ತಿಮಕಾಲಂ ವೃದ್ಧನಂ ಪೋಲ್ತುದು ಶಿಥಿಲಜರಾಜೀರ್ಣವಲ್ಲೀಶಿರೋಳಂ (?) ॥

---

[1] ಳಸಂ (ಖ.ಬ). [2] ಸಿ (ಖ). [3] ಳ್ತ (ಕ), ಳ್ಪ (ಗ.ಘ). * ಈ ಪದ್ಯವಾದ ಮೇಲೆ (ಕ) ಪ್ರತಿಯಲ್ಲಿ ವರ್ಷಾಕಾಲದ ವರ್ಣನೆಗೆ ಸೇರಬೇಕಾದ ಒಂಬತ್ತು ಪದ್ಯಗಳಿವೆ. ಅವು (ಖ.ಬ.) ಪ್ರತಿಗಳಲ್ಲಿ ಆ ಪ್ರಕರಣದಲ್ಲಿಯೇ ಇರುವುದರಿಂದ ಅವುಗಳನ್ನು ಅಲ್ಲಿಯೇ ಸೇರಿಸಿದೆ. [4] ಪಾಶತ್ವಂ (ಕ.ಖ). [5] ದ್ದು (ಖ.ಬ). [6] ನುಡಿಸುವಾ (ಕ). [7] ಪ್ರಸಸ್ಯಾ (ಕ.ಖ). [8] ಸ್ವದ್ರುಮಮಂದೆಂ (ಕ.ಖ.ಬ).

## ವರ್ಷಾಕಾಲವರ್ಣನಂ

ತಱಗೆಲೆ ಕೋಡದತ್ತಿಡಿಯೆ ಧೂಳಿವೊಲಂ ಸಱಿವೀಡೆ ಧೂಳಿಯಿಂ
ಕಿಱುಗಿಡುಗಳ್ ಮುಸುಂಕೆ ಮಱಲೊಕ್ಕಿದವೋಲಿರೆ ಬಟ್ಟೆಗಣ್ಣ ಪಾ ।
ಸ[1]ಱ[1]ಯೆಡೆಗಂಟಿ[2]ನಿಂದೊ[2]ಡೆಯೆ ತೂಱಲನಿಬ್ಬರಗೊಂಬು ಪಾಂಥರ
ಳ್ಕುಱೆ ಬಿರುಗಾಳಿ ಬೀಸಿದುದು [3]ಕೋ[3]ಡೊಳೆ ಪೊಕ್ಕು ನಿದಾಘದಂತ್ಯದೊಳ್ ॥

ಕೆದಱುತ್ತುಂ ಮಣಲಂ ತೆ[4]ರಳ್ಚಿ[4]ಕೊಳುತುಂ ಭೂರೇಣುವಂ [5]ತುಳ್ಕಿ[5]ತುಂ
ನದನದ್ಯಚ್ಛಜಳೌಘಮಂ ಮುಱಿಯುತುಂ ಭೂಜಂಗಳಂ ನುರ್ಗುತುಂ ।
ಪೊದಱಿಂ ಸೀಳುತುಮೆಯ್ದೆ ವಂಶವನಮಂ ಕಾಡಾನೆಯಂ ಪೋಲ್ತು [6]ಬೀ
ಸಿದುದೆತ್ತಂ[6] ಲಯಕಾಲಕಾಲವಿಚಲದ್ಭೀಮಾರುತಂ ಮಾರುತಂ ॥ ೧೪೪

(ಕಾವ್ಯಾವಲೋಕನಂ, ೪೧೯.)

ಒದವಿದ ಕಾರೊಳದ್ರಿಗಳ ಬೇಗೆ ತೆರ[7]ಳ್ಚಿ[7]ದು[8][ದೇಡು]ಮುಂ[8]ಡನಾ
ದುದು ಬಿಸಿಲೇಳ್ಗೆ ಕಟ್ಟಿದುದು ಸಂಬಳವಂ ಕಳಹಂಸಮಾಲೆ ಮೆ ।
ಟ್ಟಿದುದು ತುಡುಂಕಿ ಸೋಗೆ ಮೊಳೆಯೊಳ್ ಮಿಡುಕು[9]ತ್ತೆ ಳ[9]ಮಿಂಚು ಕೆ[10]ತ್ತ ಲೆ[10]
ತ್ತಿದುದು ಪಯೋಧರಾವಳಿ ತಳರ್ನಡೆಯಿಟ್ಟುದು ಪಶ್ಚಿಮಾನಿಳಂ॥ ೧೪೫

(ಅನಂತನಾಥಪುರಾಣಂ, ೯–೫.)

ವರುಣವಧೂ[11]ರತ[11]ಶ್ವಸಿತಗಂಧವಹಂ ಮಕರೇಶಚಾರುಚಾ
ಮರಮರುತಂ ಜಳೇಶಮಕರೋದ್ಗತಪುಚ್ಛಸಮೀರನಂ[12]ದ[12]ನ ।
ದ್ವಿರದನಕರ್ಣತಾಳಪವಮಾನನಿದೆಂದು ವಿತರ್ಕಿಪನ್ನಮಾ
ಸ್ಫುರಿತದವಾನಳಂ ಸುಟಿದುದೊಯ್ಯನೆ ಪಶ್ಚಿಮದಿಗ್ಭವಾನಿಳಂ॥ ೧೪೬

(ಜಗನ್ನಾಥವಿಜಯಂ, ೪–೨.)

ಮುಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಸುಟಿ[13]ಯೊತ್ತಿ[13] ಪುಟ್ಟೆ ಕೇ
ದಗೆ[14]ಗತಿ[14] ಸೊರ್ಕು ಚೇತರಿಸೆ ಚಾದಗೆಗಂ ಚಿರಮಾಗೆ ರಾಗಮಂ।
ಚೆಗೆ ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸು ಪುಟ್ಟೆ ಬೆಟ್ಟಬೇ
ಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಳಂ॥ ೧೪೭

(ರಾಮಚಂದ್ರಚರಿತಪುರಾಣಂ, ೭–೧೨೯ ; ಮಲ್ಲಿನಾಥಪುರಾಣಂ, ೮–೭೬.)

---

[1] ಱಿ (ಖ.ಬ). [2] ನೊಂದೆ (ಕ). [3] ಕಾ (ಖ.ಬ). [4] ವಾಳ್ದ (ಅ). [5] ಸೂಸು (ಅ). [6] ಪೊಕ್ಕುದು ಬೀಡಂ (ಅ). [7] ಳ್ದ (ಅ). [8] ದೆಡಹುಂ (ಅ), ದೆಡೆಮುಂ (ಖ.ಬ). [9] ತ್ತಿದೆ (ಅ). [10] ಚ್ಚಲೊ (ಅ). [11] ವರ (ಅ). [12] ಜ (ಅ). [13] ಪುಟ್ಟೆ (ಅ). [14] ಗೆಳ (ಅ).

ಮುತ್ತುದು ನೇಸಱ ತೇಜಂ
ಸತ್ತುದು ದಾವಾಗ್ನಿ ಪಡುವದೆಸೆ ಮುಗಿಲಂ।
ಸ್ತೋತ್ತುದು ಕಡ[1]ಲಿನ ತಂ[1]ಪಂ
ಪೊತ್ತುದು ಮಧುಕರಕುಲಕ್ಕೆ ಪಶ್ಚಿಮಪವನಂ॥ ೧೪೮

ಎಬ್ಬುದು ತಣ್ಣೆಲರ್ ವರುಣದಿಙ್ಮುಖದಿಂದದಱೊಂದೆ ಕಿಟ್ಟುದಿಂ
ಬಬ್ಬುದು ತೃಷ್ಣೆಯಿಂದಟಿದ ಚಾತಕಜಾತಕಚಿತ್ತಮೆಕ್ಕೆಯಿಂ।
[2][ದಿ][2]ಬ್ಬುದು ಬಟ್ಟೆ ಸಂಬಳಕೆ ಬಾಳಮೃಣಾಳಮನಂಚೆ ತಣ್ಣೆಲರ್
ಬಿಬ್ಬುದು ಕೂಡೆ ಧಾತ್ರಿ ಮೃಗಶೀರ್ಷವಿಭಾಗಮನರ್ಕನಾಳ್ವುದುಂ॥ ೧೪೯

ಮೊದಲಿಡೆ ಕಾರ್ಮುಕಂ ಗಿಳಿಯೆಱಂಕೆಯ ಬಣ್ಣದ ಪುಲ್ಗೊನರ್ ಪೊದ
ಬ್ಬುದು ಪೊಲದೊಳ್ ವಿರಾಜಿಸುವ ಮಾಣಿ[3]ಕವಣ್ಣದ ಕೋ[3]ರಕಂಗಳಿಂ।
ಪುದಿದೆಸೆದತ್ತು ಸಾಳತರು ಮುತ್ತಿನ ಬಣ್ಣದ ಕುಟ್ಮಳೌಘವಾ
ದುದು ಕುಟಜಂಗಳೊಳ್ ಪವಳವಣ್ಣದ ಪೂಗಳನಾಂತುದರ್ಜುನಂ॥ ೧೫೦

(ಜಗನ್ನಾಥವಿಜಯಂ, ೪-೬.)

ಕೆಂಗೊನರಾಯ್ತು ಸಲ್ಲಕಿ ಕದಂಬಮರಲ್ದುದು ಜಂಬು ದೋರೆವ
ಣ್ಗೊಂಡುಂಗಲನಾಂತುದತ್ತ[4]ಮುಳಕಂ' ಪರಲೊತ್ತಿದುದಿತ್ತ ಕೇತಕಂ।
ಪೊಂಗಱುಗಟ್ಟಿ[5]ದತ್ತು ವನಲಕ್ಷ್ಮಿಯ[5]ನೀಕ್ಷಿಸುವಂತಿರಾದುವೆ
ತ್ತಂ ಗಿರಿಕುಂಜದೊಳ್ ಕುಣಿದು [6]ಕೇ[6]ಗುವ ಸೋಗೆಯ ಕಣ್ಣ ಪೀಲಿಗಳ್॥ ೧೫೧

(ಅನಂತನಾಥಪುರಾಣಂ, ೯-೬.) .

ಬೆಟ್ಟದ ತೋಳನಿಂಬಱಿದು ಸಾರ್ದುವು ಬೇಡರ ಪಳ್ಳಿ ಕಾಗೆ ಗೂ
ಡಿಟ್ಟುವು ತತ್ತಿಯಿಕ್ಕಿದುವು ಪೋದಗೆ ಮೆಲ್ಲನೆಯಲ್ಲಿ ಹಂಸೆಗಳ್।
ತೊಟ್ಟನೆ ಪಾಱುಪೋದುವು ಜಲಾಶಯದಿಂ ಮರದಿಂ ಮರಕ್ಕೆ ಧಿಂ
ಕಿಟ್ಟು ಕಳಾಪಿ ಕೇಗಿದುವು ಚಾದಗೆಯೇಱಿದುವಭ್ರಮಾರ್ಗಮಂ॥ ೧೫೨

ಮುಗಿಲದಿರೇಱಿ ಕಾದಲಲರೇಱಿ ಪೊಲಂ ಪಸುರೇಱಿ ಕಾಡಮ
ಲ್ಲಿಗೆ ನನೆಯೇಱಿ ಮೊಲ್ಲೆ ನಯವೇಱಿ ಬಿಸಿಲ್ ಕಡುದಣ್ಣಸೇಱಿ ಕೇ।
ದಗೆ ಸುಟಿಯೇಱಿ ಹಂಸೆ ಭಯವೇಱಿ ನವಿಲ್ ನಲವೇಱಿ ಕಾಮಬಾ
ಹುಗೆ [7]ಬಲ[7]ವೇಱಿದತ್ತು ವಿರಹಿಪ್ರಕರಕ್ಕಲೇಱಿತರ್ಪಿನಂ॥ ೧೫೩

(ಜಗನ್ನಾಥವಿಜಯಂ, ೪-೪.)

---

[1] ವಿನಕಂ (ಖ ಬ). [2] ಪ (ಕ.ಖ.ಬ). [3] ಕಂಗಳಿಂ ಕಾ (ಕ.ಖ.ಬ). [4] ಕತರಂ (ಅ). [5] ತೆಂದುಪಲವೊಯ್ಯಯಿ (ಅ). [6] ಕೂ (ಅ). [7] ಜಯು (ಅ).

ಅಱಿದಿನಿ[1]ಸುಂ[1] ಬೆಟ್ಟದ [2]ತೋ
ಳ್ಸಱಿ[2]ಗೊಂಡಿರಲೆಂದು ಭಿಲ್ಲಪಳ್ಳಿಗಳೆಲ್ಲಂ।
ತೊಱೆದುವು [3]ತೊಱೆದಡಿಗಳನಾರ[3]
ತೊಱೆಯದರನುಕೂಲವೃತ್ತಿಗೆಟ್ಟೆಸಗುವರಂ॥ ೧೫೪

(ಜಗನ್ನಾಥವಿಜಯಂ, ೪–೧೦.)

ಘನ[4]ವಜ್ರ[4]ಜ್ವಾಲಧೂಮಾವಳಿಯೊ ಗಗನಗಂಗಾತಟೋದ್ಯತ್ತಮಾಳೀ
ವನಮೋ ವಿದ್ಯುನ್ನಟೀಕರ್ಬುರಜವನಿಕೆಯೋ ಚಾರುಮೇಘಾಗಮಶ್ರೀ।
ವನಿತಾಪಿಂಛಾತಪತ್ರಪ್ರಕರಮೊ ವಿಯದುತ್ತುಂಗಮಾತಂಗ[5]ಭೂಷಾ[5]
ಜಿನಪಕ್ಷತ್ರಾಣಮೋ [6]ಪೇಟ[6]ನೆ ನೆಗೆದುದಳಿಶ್ಯಾಮಳಂ ಮೇಘಜಾಳಂ॥ ೧೫೫

(ಚಂದ್ರಪ್ರಭಪುರಾಣಂ, ೪–೩೧.)

ಒಟ್ಟಿದ ವಾರಿದೇರುಗಳವೋಲ್ ಕೆಲವೊಪ್ಪಿರೆ ದೂರಭಾಗದೊಳ್
ಕಟ್ಟಿದ ಗಂಧವಾರಣದವೋಲ್ ಕೆಲವೊಪ್ಪಿರೆ ತಳ್ತ ಕರ್ಪೊಡಂ।
ಬಟ್ಟೆಸೆದೆತ್ತಿದೋಳಿಗುಡಿವೋಲ್ ಕೆಲವೊಪ್ಪಿರೆ ನೀರದಂಗಳೊಂ
ದಿಟ್ಟಳವೊಪ್ಪಿದತ್ತು ಮಱೆಗಾಲದ ಬೀಡಿನವೋಲ್ ನಭಸ್ಥಳಂ॥ ೧೫೬

ವರುಣನ ಕೇಲಾರದ ತುಱು
ಖರಕರಕೃತ ನಿರತ [7][ನೀರದಾಂ][7]ಬರ ವಿಪಿನಾಂ।
ತರಮನಡರ್ದೇಱಿದಪುವೆನೆ
ವರುಣಾಶೆಯಿನಭ್ರಪಥವನೇಱಿದುದಭ್ರಂ॥ ೧೫೭

ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲಕೀಲಾ
ವಳಿ ಸಂಜಾತೇಂದ್ರಗೋಪಪ್ರಸರವಿಸರ[8]ದ[8]ರ್ಚಿಃಕಣಂ ಪಶ್ಚಿಮಾಶಾ।
ನಿಳ[9]ವಾ[9]ತೋಜ್ಜೃಂಭಿತಂ ಬಂದುದು ವಿರಹಿತರುವ್ರಾತಮಂ ಪರ್ವುವಗ್ರಾ
ನಳನೆಂಬಂತಬ್ದಕಾಲಂ ಸ್ತನಿತಧಗಧಗಧ್ವಾನರೌದ್ರಾಯಮಾಣಂ॥ ೧೫೮

(ಚಂದ್ರಪ್ರಭಪುರಾಣಂ, ೪-೨೯.)

ಸ್ತನಿತಘನಬೃಂಹಿತಂ ಮು
ರ್ದಿನಮದಪೂರಂ ಪಯೋದ[10]ಗಜ[10]ಘಟೆ ಸು[11]ಟಿ[11]ದ।

---

[1] ಸಂ (ಅ). [2] ತಾಪ್ಸೆಱೆ (ಅ). [3] ತೋಱೆದಡಿಗಳಾ (ಕ.ಖ.ಬ). [4] ವಹ್ನಿ (ಅ). [5] ರುಕ್ಷಾ (ಕ), ಋಕ್ಷಾ (ಖ.ಬ). [6] ಮೋಣಿ (ಅ). [7] ನಿರತಾಂ (ಕ.ಖ.ಬ). [8] ಮ (ಖ.ಬ). [9] ಪಾ (ಅ). [10] ಘನ (ಕ.ಖ.ಬ). [11] ರಿ (ಖ.ಬ).

ತ್ತಿನರುಚಿಪಲ್ಲವಕುಳಕಬ
ಳಿನಲೀಲೆಯಿನಂತರಿಕ್ಷಕಕ್ಷ್ಯಾಂತರದೊಳ್ ॥ ೧೫೯
(ಚಂದ್ರಪ್ರಭಪುರಾಣಂ, ೪–೩೨.)

ಮುಂ ಬಿಸಜೋದ್ಭವಂ ಸಮೆದನಂಬುದಮಂ ಪವಮಾನಧೂಮತೇ
ಜೋಂಬುಗಳಿಂದಮೆಂಬ ನುಡಿ ಸತ್ಯಮದಲ್ಲದೊಡುಂತೆ ಕಾರ ಕಾ।
ದಂಬಿನಿ ಮಾಣ್ಕುಮೇ ಬಿರಯಿಗಂಗಜವಹ್ನಿ ವಿಜೃಂಭಮಂ ವಿಳೋ
ಳಾಂಬಕವಾರಿಯಂ [1]ತನುನಿದಾಘ[1]ಮನುತ್ಕಳಿಕಾಪ್ರಪಂಚಮಂ॥ ೧೬೦
(ಚಂದ್ರಪ್ರಭಪುರಾಣಂ, ೪–೩೨.)

ಇಂಬುಗಿಡಿಸಿದುವು ದೆಸೆಗಳ
ನಂಬರಮಂ ಪೀರ್ದು[2]ವಹಿಮ[2]ಹಿಮಕರಕಿರಣಾ।
ಡಂಬರಮಂ ನೋಣೆದುವು ಪಿರಿ
ದುಂ ಬೇಸಱಿಸಿದುವು ಬಿರಯಿಯಂ ಜಲದಂಗಳ್॥ ೧೬೧
(ಚಂದ್ರಪ್ರಭಪುರಾಣಂ, ೪–೩೪.)

ನಲ್ಲರನಪ್ಪೆ ಮುಗ್ಧೆಯರು ದುರ್ಭಯಸಂಭ್ರಮದಿಂದೆ ಹಂಸೆಗಳ್
ನಿಲ್ಲದೆ ಪಾಱಿಪೋಗೆ ಕೊಳದಿಂ ನವಿಲ್ ಮೊಱೆಯೆ ಕೇಳ್ದು ನರ್ತನೋ।
ತ್ಫುಲ್ಲತೆಯಂ ನೆಗಳ್ದೆ ಮೊಱಗಿತ್ತು ಮುಗಿಲ್ ಘನಕಾಲಭೂಮಿಭೂ
ವಲ್ಲಭದಿಗ್ಜಯೋದ್ಯಮಮಹೋತ್ಸವದುಂದುಭಿ ತಾನಿದೆಂಬಿನಂ॥ ೧೬೨

ಹರಿಗೋಪಾಲಪದಕ್ಕೆ ತೂರ್ಯಪಟುಘೋಷಂ ಕೇಕಿನಾಟ್ಯಕ್ಕೆ ಬಂ
ಧುರ ಢಕ್ಕಾನಿನದಂ ವಿಯೋಗಿನಿವಹಕ್ಕಂಗೋದ್ಭವಜ್ವಾಲತೋ।
ದ್ಧುರನಾದಂ ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀ
ರರವಂ ತಾನೆ[3]ನಿಸಲ್ಕೆ[3] ಮೇಘನಿನದಂ ಪೊಣ್ಮಿತ್ತು ರೋದೋಂತದೊಳ್॥ ೧೬೩
(ಜಗನ್ನಾಥವಿಜಯಂ, ೪–೮.)

ಪಿಕಮೌನವ್ರತದುಂದುಭಿಧ್ವನಿ ಬಲಾಕಾದೃಶ್ಯಚೂಡೋದಯಾ
ನಕರಾವಂ ಶಿಖಿನೃತ್ಯವಾದ್ಯರುತಿ ಪೋತಕ್ಯುದ್ಭಗರ್ಭೋತ್ಸವೋ।
ತ್ಸುಕವಾದಿತ್ರರವಂ ಮರಾಳಗಮನಾತೋದ್ಯಸ್ವನಂ ಚಾತಕೋ
ದಕಕೇಳೀಕೃತತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ॥ ೧೬೪
(ಚಂದ್ರಪ್ರಭಪುರಾಣಂ, ೪–೩೫.)

---

[1] ಹೃದಯತಾಪ (ಅ). [2] ವಹ್ನಿ (ಖ,ಬ). [3] ನೆನವ್ಯ (ಅ).

ರಸನಾಲಂಪಟನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭ-
ಕ್ಷಸಮಸ್ತಾಟವಿಭುಂಜಿತೋಗ್ರನೆನಿಪೀ ದಾವಾಗ್ನಿಯಂ ಕಾಲ್ಗಳಿಂ।
ಪೊಸೆವೆಂ ಕಾಡ್ಪೊನಲಿಂ ಪೊರಳ್ಚುವೆನರಣ್ಯಶ್ರೀಯೆ ಕೇಳೆಂದು ಗ
ರ್ಜಿಸಿ ಮೇಘಂ ನುಡಿವಂದದಿಂ ಸ್ತನಿತಘೋಷಂ ಪೊಣ್ಮಿತಂದೆತ್ತಲುಂ॥ ೧೬೫

ವಾದನದಂಡಂ ಕುಡುಮಿಂ
ಚಾದುದು ನೇಣಾದುದಮರಚಾಪಂ ವರದಂ।
ಭೋದಮದು ಢಕ್ಕೆಯಾದುದು
ವಾದಕನಾದುದು ನಟತ್ಕಲಾಪಿಗೆ ಗಗನಂ॥ ೧೬೬

ರಾಗದ ಬಳ್ಳಿ ಚಾದಗೆಗೆ ಕಾಂಚನಚಂಚಲಲಾಸ್ಯ[1]ತರ್ಜನಂ[1]
ಸೋಗೆನವಿಲ್ಗೆ ಮೇಖಲೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾ।
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ ನಭೋ
ಭಾಗಮನೆಯ್ದೆ ಬಿತ್ತರಿಸಿದತ್ತು ತಟಿಲ್ಲತೆ ಲಾಸ್ಯಲೀಲೆ[2]ಯಿಂ[2]॥ ೧೬೭
(ರಾಮಚಂದ್ರಚರಿತಪುರಾಣಂ, ೭–೧೪೮ ; ಮಲ್ಲಿನಾಥಪುರಾಣಂ, ೮–೮೮.)

ಘನಘನಚಾಪದೊಳ್ ಸ್ಫುರಿತ ಮನ್ಮಥರಾಗಸುವರ್ಣರೇಖೆ ನೂ
ತನಜಳವಾಹಕೇಶಯುಗಳಂ ನವಚಂಪಕಮಾಲೆ ವಾರಿಭೃ।
ಜ್ಜನಪತಿಹಸ್ತಖಡ್ಗಲತೆ ಮೇಘ[3]ನೃಪೋ[3]ಜ್ಜ್ವಳದೀಪಮಾಲೆ ತಾ
ನೆನೆ ಕಡುಗಾಡಿಯಿಂದಿಟಿದು ಮಿಂ[4]ಚಸೆ[4]ದತ್ತು ನಭೋವಿಭಾಗದೊಳ್॥ ೧೬೮

ಜಳಮಂ ವಾರಾಶಿಯೊಳ್ ಮಿರ್ಱಬೆರಸು ಮೊಗೆತರಲ್ ಮೇಘವಾ ಬಾಳೆಮೀನ್ಗಳ್
ಪೊಳೆದಾಡುತ್ತಿರ್ದುವಾಕಾಶದೊಳೆ[5]ನಲವಿ[5]ಭಿನ್ನಾಂಜನಚ್ಛಾಯೆಯಿಂ ಗೊಂ।
ದಳಿಸಿರ್ದಂಭೋದ[6]ದಿಂದುಚ್ಚಳಿಸಿ[6] ಪೊಳೆವ ವಿದ್ಯುಲ್ಲತಾಜಾಲಮಾಗಳ್
[7]ತ[7]ಳೆದತ್ತಾಶ್ಚರ್ಯಮಂ ಕಟ್ಟಲೆ ಬಿಡೆ ಬಿಸಿಲಂ ಕಾ[8]ಱುದೊಂದಂ[8]ದದಿಂದಂ॥ ೧೬೯
(ಜಗನ್ನಾಥವಿಜಯಂ, ೪–೧೫.)

ಸಕಲಾಬ್ಧಾಂಭಸ್ಸಿರಾಮೋಚನಸುನಿಶಿತಶಸ್ತ್ರಂ ಪ್ರಯಾಣೋತ್ಕಹಂಸ
ಪ್ರಕರಪ್ರಸ್ಥಾನಭೇರೀಕನಕಮಯಕನತ್ಕೋಣಮಾಸಾರಲಕ್ಷ್ಮೀ।
ಪ್ರಕಟಾಂಭೋದಾವಳೀವಿಶ್ಲಥಕಬರಿಭರಸ್ರಂಸಿದಾಮಂ ಚಳಚ್ಚಾ
ತಕರಾಜ್ಯಶ್ರೀಕಟಾಕ್ಷದ್ಯುತಿಲತಿಕೆ ತಟಿನ್ಮಾಲೆ ಚೆಲ್ವಾದುದಾದಂ॥ ೧೭೦
(ಚಂದ್ರಪ್ರಭಪುರಾಣಂ, ೪–೩೧.)

---

[1] ಜರ್ಝರಂ (ಖ.ಬ). [2] ಯಿಂ (ಕ). [3] ಗೃಹೋ (ಖ.ಬ). [4] ಚಿಸಿ (ಖ.ಬ). [5] ನೆನೆವ (ಖ.ಬ). [6] ದೊಳ್ ತಾಂಬಳಸಿ (ಅ). [7] ಮೊ (ಖ.ಬ). [8] ಱುತಿರ್ಪೊಂ (ಅ).

ಗಗನಶ್ರೀಯ ವಿಚಿತ್ರವಸ್ತ್ರವಿಲಸತ್ಸಂವ್ಯಾನಮೆಂಬಂತೆ ಕಾ
ರ್ಮುಗಿಲೆಂಬಾನೆಯ ರನ್ನದಗ್ಗವಣೆಯೆಂಬಂತಬ್ಜಗರ್ಭಾಂಡಭೂ
ರಿಗೃಹದ್ವಾರ[1]ದ ರತ್ನ[1]ತೋರಣಮಿದೆಂಬಂತಭ್ರದೊಳ್ [2]ನಾ[2]ಡೆ ದಿ
ಟ್ಟಿಗೆ ಚೆಲ್ವಾಯ್ತು ಬಹುಪ್ರಭಾಶಬಳಿತಂ ಗೀರ್ವಾಣಬಾಣಾಸನಂ॥ ೧೭೧

(ಜಗನ್ನಾಥವಿಜಯಂ, ೪–೧೬.)

ನನೆಗೋಲ್ ಕರ್ಬಿನ ಬಿಲ್ ಮದಾಳಿಕುಳಲೇಖಾಮೌರ್ವಿಯೆಂಬರ್ ಮನೋ
ಜನ ಬಿ[3]ಲ್ ಮುಂ[3] ಪುಸಿಯಲ್ತು ಮೂಡುತಿದೆ ನಾನಾವರ್ಣದಿಂ [4]ಮಿಟ್ಟುವೆಂ[4]।
ದೆನಸುಂ ಬಾಯ್ಬಿಡೆ ಕಾಮುಕಾವಳಿ ಪಯೋಭೃತ್ಕೃಷ್ಣವಕ್ಷಃಸ್ಥಳೀ
ವನಮಾಲಾ[5]ಯತ[5]ಮೇಂ ಪೊದಟ್ದೆಸೆದುದೋ ಗೀರ್ವಾಣಬಾಣಾಸನಂ॥ ೧೭೨

(ಅನಂತನಾಥಪುರಾಣಂ, ೯–೧೧.)

ಮಾಮರ್ಗಿಲೊಡ್ಡಿದತ್ತು ತುಱುಗಾರ್ತಿಯ ಕೋಣೆ ಕಡಂಕಿ ಮಿಂಚಿದ
ತ್ತೊರ್ಮೆಯೆ ನಿಂದ ನೀರ್ತೆಗೆದುದೊರ್ಮೆ ಬಿಸಿಲ್ಗೆ ಪೋದಟ್ದುದೋಳಿಯಿಂ।
ಘರ್ಮಮರೀಚಿಮಂಡಳತರಂಗಿತ ಮ್ಯೆವಳಿಯಾಯ್ತು ನೀರ್ಗದಿರ್
ಪೆರ್ಮೆಯಾಗದೀಗಳೆನುತಿರ್ದುದು ರಾಗದಿನುರ್ಬಿದಾ ಜನಂ॥ ೧೭೩

ಥಟಥಟಿಸೆ ಮಿಂಚು ಮಿಂಚಿದ
ಬಟಿಯನೆ ದಳದಳಿಸಿ ಮೊಟಗಿ ಮಿಗೆ ಮೊಟಗಿದವಂ।
ಬಟಿಯನೆ ಕಡಲಂ ಮೆಲ್ದಿಗೆ
ದೆಟಲಿಕ್ಕಿದ ತೆಱದಿನೆಟಗಿಕೊಂಡುವು ಮುಗಿಲ್ಗಳ್॥ ೧೭೪

ಮೇ[6]ಲೇಟ್ವೆ[6] ಮುಗಿಲ [7]ಹೇಱಿನ[7]
ಮಾಲೆಗಳಂ ನೆಗೆದು ಕೊರಡುಗೊಂಡವೊಲೆತ್ತಂ ।
ಸಾಲಿಟ್ಟುವೆರಲವಟ್ಟೆಯೊ
ಳಾಲಿವರಲ್ವೆರಸು ತೋರವನಿ [8]ಮುಂಗಾ[8]ರೊಳ್ ॥ ೧೭೫

(ಅನಂತನಾಥಪುರಾಣಂ, ೯–೮.)

ಉಪಶಾಂತರಜೋವಿಕೃತಿಯ
ನುಪ[9][ಗತ] ಕಾ[9]ಳಿಮಪಯೋಧರಸ್ಮಿತೆಯಂ ಮು ।
ತ್ತುಪಚಿತಜಡವೃತ್ತಿಯನೆ
ಯ್ದೆ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ ॥ * ೧೭೬

---

[1] ದುದಾರ (ಅ). [2] ನೋ (ಅ). [3] ಲ್ಲಂ (ಅ). [4] ಬಿಲ್ಲುಮೆಂ (ಕ.ಖ.ಬ). [5] ಮಯು (ಅ). [6] ಲಲವ (ಅ). [7] ಹೊದಱಿನ (ಅ). [8] ಕೊಳ್ಗಾ (ಅ). [9] ........ ತಾ (ಖ.ಬ). * ಈ ಪದ್ಯವು (ಕ) ಪ್ರತಿಯಲ್ಲಿಲ್ಲ.

ವಿಳಸಿತ ಕಂ[1]ದಳಂ[1] ವಿ[2]ನಿಪತತ್ಕ[2]ರಕಂ ಕ್ಷುಭಿತೋರುವಾಹಿನೀ
ಕುಳನಿನದಂ ಗಳಚ್ಛರಸಮಗ್ರಮುದಗ್ರಸುಪರ್ವಚಾಪಮಂ ।
ಡಳಲಲಿತಾಂಬರಂ ವಿಹರಿದಶ್ವಸಮುತ್ಕರ[3]ಮಂದಗುರ್ವನೇಂ[3]
ತಳೆದುದೊ ಪೋಲ್ತು ಯುದ್ಧ[4]ದ ಸಮು[4]ಕ್ರಮಮಂ ಜಲದಾಗಮಕ್ರಮಂ ॥ ೧೭೭
(ಚಂದ್ರಪ್ರಭಪುರಾಣಂ, ೪–೪೪.)

ಘನಸಮಯಶಬರ ಕರಗತ
ಕನತ್ತಟಿದ್ದಂಡಪಾತವಿಗಳನ್ನೀಳ ।
ಸ್ತನಯಿತ್ನುಕುಳತಮಾಳೀ
ವನಪ್ರಸೂನಂಗಳೆನಿಸಿದುವು ಕರಕಂಗಳ್ ॥ ೧೭೮
(ಚಂದ್ರಪ್ರಭಪುರಾಣಂ, ೪–೩೭.)

ಬಿಟ್ಟ ಸಿಡಿಲ್ದವಾಲಿವರಲಾಲಿವರಲ್ಗಳ ಪಿಂತೆ ಧಾರೆಗಳ್
ಬಿಟ್ಟವು ಧಾರೆಯಂ ಬೆಳಗಿ ತೋಱುವವೋಲ್ ಪೊಳಪೇಱ ಮಿಂಚು ಮಿಂ ।
ಚೆಟ್ಟವು ಮೇಘದೊಳ್‌ ವೊಟಗೆ ಮೇಘದ ಸಂದಣಿಯಿಂದೆ ಭೋರೆನು
ತ್ತೆಟ್ಟಱೆ ಕೊಳ್ವ ಪೆರ್ಮಟೆಯ ಘೋಷವದೇನೆಸೆದತ್ತೊ ಕಾರ್ಮುಗಂ ॥ ೧೭೯

ತೀಡುವ ಪಶ್ಚಿಮಾನಿಳನ ತೀಟ[5]ದಿನು[5]ತ್ಕಟಮಾಗೆ ರಾಗಮಿ
ರ್ಪೋರ್ಡಿದ ಚಂಚುವಂ ತೆಱೆದೆಱಂಕೆ ನೆಱಲ್ದಿರೆ ಕಂಠನಾಳಮಂ ।
ನೀಡಿ ವಿಯತ್ತಳಕ್ಕೊಗೆದು ಕಾರ ಮುಗಿಲ್ವನಿಯಿಂ ಮನಂ ಕುಳಿರ್
ಕೋಡುವಿನಂ ಕರ್ದುಕಿಂಕಿ ನಲಿ[6]ವಾಱಿದು ವಾಱಿದುವೆಂದು[6] ಚಾತಕಂ ॥ * ೧೮೦
(ರಾಮಚಂದ್ರಚರಿತಪುರಾಣಂ, ೭–೧೪೭ ; ಮಲ್ಲಿನಾಥಪುರಾಣಂ, ೮–೮೭.)

ಗಱಿಗಳ್ ಮಿಳ್ಳಿಸೆ ಗೋಣ್ ಮರಲ್ದು ಮಡಪಿಟ್ಟಂ ಬಿರ್ಚಿ ಚಂಚೂಪುಟಂ
ದೆಱೆದಳ್ಕೆತ್ತಿದಿರ್ವಾಱ ಪೀರ್ದು ನಭದೊಳ್ ವಾರ್ಧಾರೆಯಂತೇಱೆ ಮ್ಯೊ ।
ಮಱುಕಂ ಸೊರ್ಕಿನಳುರ್ಕೆಗಾಲಿವರಲಾ ಪೊಯ್ದುಣ್ಣೆ ಕಲ್ಲಾಡಲುಂ
ತಿಱಿಕಲ್ಲಾಡಲದೇಂ ತಗುಳ್ದುವೊ ಮನಸ್ಸಂಪ್ರೀತಿಯಿಂ ಚಾತಕಂ (?) ॥ ೧೮೧
(ಅನಂತನಾಥಪುರಾಣಂ, ೯–೯.)

ಮನುದನುರಾಗದಿಂ ನೆಗೆದು ನೀಡಿದ ಕಂಠಮರಲ್ದ ತುಪ್ಪುಟ
ರ್ಬನಿಮಿಷಮಾದ ಕಣ್ ತೆಱೆದ ಚಂಚು ವಿಜೃಂಭಿಪೆಱಂಕೆ ರಂಜಿಸಿ ।

---

[1] ಧರಂ (ಕ.ಖ.ಬ). [2] ನೀತಪಕ್ಕ (ಖ.ಬ). [3] ದಂಡುಗುರ್ಬಿಗೇಂ (ಖ.ಬ) [4] ಸಮಯ (ಅ). [5] ದೊಳು (ಅ). [6] ದಾಡಿದು ಪಾಱಿದುದೊಂದು (ಅ). * ಈ ಪದ್ಯದಿಂದ ಮುಂದಿನ ಹತ್ತು ಪದ್ಯಗಳು (ಕ) ಪ್ರತಿಯಲ್ಲಿ ಗ್ರೀಷ್ಮವರ್ಣನಾಭಾಗದಲ್ಲಿ ಸೇರಿಹೋಗಿವೆ. (ಖ.ಬ) ಪ್ರತಿಗಳಲ್ಲಿ ಈ ಪದ್ಯವಿಲ್ಲ.

ತ್ತನೆ ನಲವೇಱಿ ತೋರವನಿ ತಣ್ಬನಿ ಮುಂಬನಿಯೆಂಬ ಕಾರ್ಮುಗಿ
ಲ್ವನಿಯನಲಂಪಿನಿಂದಮಿದಿರ್ಗೊಂಡು ಕರ್ದುಂಕಿದುದ್ಧಚಾತಕಂ ॥ ೧೮೨

(ಜಗನ್ನಾಥವಿಜಯಂ, ೪-೧೭.)

ಇದಿರ್ಗೊಂಡಾಯ್ಕುಳಿಗೊಂಡು ಕೊರ್ಬಿದ ನವಾಂಬೂದ್ಬಿಂದುವಂ ನುಂಗಿ ಪೆ
ರ್ಚಿದಲಂಪಿಂ ಜಲಧಾರೆಯಂ ಕರ್ದುಕಿದತ್ತೆಯ್ತಂದು ಮುಂಡಾಡಿದತ್ತೊ ।
ದೆದತ್ತೀಡಿಱಿದತ್ತು ಚಂಚುಪುಟದಿಂ ಪೊಯ್ದತ್ತು ಪಕ್ಷಾಗ್ರದಿಂ
ಬಿದಿರ್ದತ್ತೋಕುಳಿಯಾಡಿದತ್ತು ನಿಜತೃಷ್ಣಾಘಾತಕಂ ಚಾತಕಂ ॥ ೧೮೩

ಜಳಧರಮುಕ್ತನವ್ಯಜಳಬಿಂದುಗಳಂ ನೆ[1]ಗೆ[1]ದಾಯ್ದು ನುಂಗಿ ಕ
ಣ್ಮಲರ್ಗೊಳೊಳೋ[2]ವಿ[2]ಕೊಂಡು ಕುಣಿದಾಡಿದುದುಜ್ವಲಮಪ್ಪ ಧಾರೆಯೊಳ್ ।
ಗಿಲಿಗಿಲಿಗಂಬವಾಡಿದುದೆಱಂಕೆಗಳಂ ಕೆದಱಿತ್ತು ಮುದ್ದಿನಿಂ
ಕೆಲಕೆ ನಿರಾಕುಳಂ ತೆಗೆದುದಪ್ಪಿದುದೊಪ್ಪಿದುದೊಂದು ಚಾತಕಂ ॥ ೧೮೪

ವಸುಧಾವಲ್ಲಭೆ ಮೇಘಕಾಲವಿಟನೊಳ್ ಸಂಭೋಗಮಂ ಮಾಡೆ ಬಂ
ಣ್ಣಸರಂ ಪೋರ್ಕುಳಿಯಿಂದಲೇ ಪಱಿದು ಸೂಸಿತ್ತಲ್ಲದಂದೆತ್ತಣಿಂ ।
ಪೊಸಮುತ್ತುಂ ಕಿಸುಗಲ್ಗಳುಂ ಕೆದಱಿ ಕಣ್ಗೊಂಬಾದುವೆಂಬಂತದೇ
ನೊಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ ॥ ೧೮೫

(ರಾಮಚಂದ್ರಚರಿತಪುರಾಣಂ, ೭-೧೪೬ ; ಮಲ್ಲಿನಾಥಪುರಾಣಂ, ೮-೮೬.)

ವಾಸವಚಾಪಮೆಂಬ ಮಣಿಮಂಟಪದೊಳ್ ಮೊೞಗೆಂಬ ವಾದ್ಯಮಂ
ಗೋಸನೆ ಮೇಘಮೆಂಬ ತೆರೆಯಿಂದೆ ತಟಿನ್ನಟಿ ಬಂದು ನಾಟ್ಯವಿ ।
ನ್ಯಾಸದೆ ಕೊಂಕಿ ನಿಂದು ಕುಸುಮಾಂಜಳಿಯಂ ಕುಡೆ ಮುತ್ತು ಮಾಣಿಕಂ
ಸೂಸಿದುವೆಂಬಿನಂ ಪರೆದುವಾಲಿವರಲ್ಗಳುಮಿಂದ್ರಗೋಪಮುಂ ॥ ೧೮೬

(ಅನಂತನಾಥಪುರಾಣಂ, ೯-೧೨.)

ಅಂಬರದ ನಡೆಮುಗಿಲ್ ದಾ
ಳಿಂಬದ ಬಿಡುವಣ್ ನಕಾಯಚಿತ್ತಂ ಸಾರ್ಚಿ ।
ತ್ತೆಂಬಂತೆ ಬಲಾಹಕದಿಂ
ದಂ ಬಿಟ್ದಪುವಿಂದ್ರಗೋಪಮಾಲಿವರಲ್ಗಳ್ ॥ ೧೮೭

ಉಗುೞುತ್ತುಂ ಸಿಡಿಲೆಂಬ ತೋರಗಿಡಿಯಂ ಕಾಲೂಱಿ ಭೂಭಾಗದೊಳ್
ಗಗನಾಭೋಗಮನೆಯ್ದೆ ನೀಳ್ದ ಘನವೇಣೀ ಬಂಧಮಂ ಬಿರ್ಚಿ ಮಿಂ ।

[1] ನೆ (ಗ.ಘ). [2] ತ್ತಿ (ಗ.ಘ).

ಚುಗಳೆಂಬುಳ್ಕುವ ದಾಡೆಗಳ್ ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ
ಸಗೆಯಂ ಬೆರ್ಚಿಸಿ ಗರ್ಜಿಸುತ್ತುಮೊಗೆದಂ ಕಾರೆಂಬ ಕಾಳಾಸುರಂ ॥ ೧೮೮
(ರಾಮಚಂದ್ರಚರಿತಪುರಾಣಂ, ೭–೧೫೨; ಮಲ್ಲಿನಾಥಪುರಾಣಂ, ೮–೯೪.)

ಎಳಮಿಂಚಂ ತಳೆಯಿಕ್ಕಿ ಚಾದಗೆಗಳಂ ಬಿಟ್ಟಾಡಿ ಬಲ್ಗಟ್ಟಲಿ
ಟ್ಟಳಿನೀಳಾಂಬುದದಿಂ ಬೆಳಲ್ದ ಗಗನ ಶ್ರೀಧೇನುವಂ ಕೋಮಳಾ ।
ಮಳದೀರ್ಘಾಮೃತಧಾರೆಗಳ್ ಸುರಿಯೆ ಭೋರ್ ಭೋರೆಂಬಿನಂ ಶಕ್ರಚಾ
ಪಲತಾದಾಮಕದಿಂದೆ ಕಟ್ಟಿ ಕಱೆದಂ ಕಾರೆಂಬ ಗೋಪಾಲಕಂ ॥ ೧೮೯

ನವನೀಳಾಂಭೋದವಂಭೋದದಿನೆಱಗುವ ಧಾರಾಳಿ ಧಾರಾಳಿಗಳ್ ಸೂ
ಸುವಿನಂ ತಳ್ಪೊಯ್ಯೆ ಜಂಝಾನಿಳನನಿಳನಿನಾವೋದಮಂ ಪೇಱು ಪೂವೇ ।
ಱುವ ಕುಂದಂ ಕುಂದದೊಳ್ ತಳ್ತಳಿಗಳಳಿಗಳಂ ಪಣ್ಗಳಿಂ ಗೆಲ್ದ ಜಂಬೂ
ನಿವಹಂ ಚೆಲ್ವಾಗೆ ಚೆಲ್ವಾದುದು ಚಟುಲತಟಿಜ್ಜಾಲವಂಭೋದ[1]ಕಾಲಂ[1] ॥ ೧೯೦
(ಜಗನ್ನಾಥವಿಜಯಂ, ೪–೨೭.)

ನೆರೆದ ಮುಗಿಲ್ ಕಲಂಕುವುದನೀಕ್ಷಿಸಿ ತನ್ನ ಮನಂ ಕಲಂಕಿ ಕ
ರ್ಗಿರೆ ಮಱಿದುಂಬಿವಿಂಡನೊಳಕೊಂಡಿರುಳೊಳ್ ಮುಗಿದಿರ್ದ ಪಾಂಡುಪಂ ।
ಕರುಹದ ಭೃಂಗಿಯಂ ತಳೆದು ವಿಸ್ಮಿತಮಾನಸರಾಗಿ ಮಾನಸರ್
ಪರಿಕಿಸೆ ಮಾನಸಕ್ಕೆ ನಡೆಗೊಂಡುದು ಕೂಡೆ ಮರಾಳಮಂಡಲಂ ॥ ೧೯೧

ವಸುಧಾಚಕ್ರಕ್ಕೆ ಕಾಳಾಯಸಗೃಹ[2]ವಿಲಸಂ[2] ಚಂದ್ರಬಿಂಬಕ್ಕೆ ರಾಹು
ಗ್ರಸನಂ ಚಂಡಾಂಶುಬಿಂಬಕ್ಕೆ[3]ಸಮಯ[3]ರಜನೀಪ್ರೋದ್ಗಮಂ ವಜ್ರವಹ್ನಿ ।
ಪ್ರಸರಕ್ಕುದ್ದಾಮಧೂಮೋದಯಮಖಿಳವಿಯೋಗಾತುರರ್ಗಂಧಕಾರೋ
ಲ್ಲಸನಂ ತಾನೆಂಬಿನಂ ಬಂದುದು ಬಹುಳತಟಿಜ್ಜಾಲಮಂಭೋದಕಾಲಂ ॥ ೧೯೨
(ಕಾದಂಬರಿ, ಉ. ಭಾ., ೫೨೯.)

ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಿಂ ಮಾಡಿ ನೀಡುಂ ಭಯಂ
ಕರಮಾಗೇಱಿಸಿಕೊಂಡು ಶಕ್ರಧನುವಂ ಧಾರಾಶರಾಸಾರಮಂ ।
ಸುರಿಯುತ್ತುಂ ಘನಘೋಷಗರ್ಘರತರಪ್ರಧ್ವಾನದಿಂದಾರ್ದು ಪಾ
ರ್ದಿರ[4]ದುದ್ದಾಮ[4] ನಿದಾಘಮಂ ಬೆದಱೆ ಬೆಂಕೊಂಡತ್ತು ಮೇಘಾಗಮಂ॥ ೧೯೩
(ಕಾದಂಬರಿ, ಉ. ಭಾ., ೫೩೦.)

---

[1] ಜಾಲಂ ಕ.ಖ.ಘ). [2] ಘರಣಂ (ಅ.) [3] ವಮೆಯ (ಅ.) [4] ದುಂಗಾಹ (ಖ.ಬ).

ಧರೆಯೊಳ್ ಶಾಲೂರಸಂಘಂ ಪವನಪಥದೊಳಂಭೋಧರಾನೀಕವಾಶಾಂ
ತರದೊಳ್ ಜಂಝಾಸಮೀರಂ ವನಸಮುದಯದೊಳ್ ಕೇಕಿಸಂಘಾತಮುರ್ವೀ।
ಧರ[1]ವಪ್ರ[1]ಪ್ರಾಂತದೊಳ್ ನಿರ್ಝರತತಿ ತಟಿನೀವ್ಯೂಹದೊಳ್ ವಾರಿಪೂರಂ
ವಿರಹಿವ್ರಾತಕ್ಕಗುರ್ವಂದೊಡನೊಡನನಿತುಂ ಗರ್ಜಿಸುತ್ತಿರ್ದುದೆತ್ತಂ ॥ ೧೯೪
(ಕಾದಂಬರಿ, ಉ. ಭಾ., ೫೩೨.)

ಸ್ಫುರಿತ ತಟಿತ್ಪ್ರಭಾಪ್ರತತಿ ಕಟ್ತಲೆಯಂ ಸುರಗೋಪಕಾಂತಿ ಪಾಂ
ಡುರತೆಯನಂಬುವಾಹತತಿ ಶೋಷಣಮಂ ಘನವಾರಿಧಾರೆ ನಿ ।
ರ್ಝರ ಪರಿ[2]ತೋದ[2]ಮಂ ಕುಟಜಕುಂದ ನವೋದ್ಗಮ[3]ರಾಜಿ[3] ರಾಗಮಂ
ವಿರಹಿಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ॥ ೧೯೫
(ಕಾದಂಬರಿ, ಉ. ಭಾ., ೫೩೪.)

ಪಸುರ್ವುಲ್ಲಂ ಮೇದು ಸಂದೊಂದೆಡೆಯೊಳವೊಡಲಿಂಬಿಲ್ಲೆನಲ್ ಕೊರ್ವಿ ಕೆಚ್ಚಲ್
ಕುಸಿವನ್ನಂ ಬೀಗಿ ಪಾಲಂಬಿರಿವಿಡೆ ಮೊಲೆಯಿಂ ವತ್ಸಪೀತಾವಶೇಷಂ ।
ಪೊಸಗಾರೊಳ್ ತಾಱಲೊಳ್ [4]ಕಣ್ಮಲರ್ ಮುಗುಳ್ದಿರೆ[4] ಸೃಕ್ವಂಗಳಿಂ ಸೂಸೆ ಫೇನ
ಪ್ರಸರಂ ಮೆಲ್ಕೊತ್ತುತುಂ ಸಿಂದುದು ವನಮಹಿಷೀವೃಂದಮಾನಂದದಿಂದಂ ॥
(ರಾಮಚಂದ್ರಚರಿತಪುರಾಣಂ, ೬–೫೬; ಮಲ್ಲಿನಾಥಪುರಾಣಂ, ೮–೯೯.)

ಬಯಲೊಳ್ ಪರ್ವುಗೆದೋಱ [5]ಮುಂಬಸ[5]ಲೆಯೊಳ್ [6]ಮೆಲ್ಪೋ[6]ಱ ನೀರ್ದಾಣ [ದೊಳ್
ನಯಮಂ ಬೀಱ ಮಹೀಧ್ರದೊಳ್ ಮಸಕಮಂ ಕೈಕೊಂಡು ಶಾಖಾಸಮು ।
ಚ್ಚಯದೊಳ್ ಸಂದಣಿಗೊಂಡು ತಾೞವನದೊಳ್ ಕಾರ್ಕಶ್ಯಮಂ ಕೂಡಿಕೊಂ
ಡು ಯಥಾ[7]ಧಾ[7]ರನಿಪಾತಮುಣ್ಮಿದುದು ಮೇಘೋನ್ಮುಕ್ತಧಾರಾರವಂ॥ ೧೯೬
(ಕಾದಂಬರಿ, ಉ. ಭಾ., ೫೩೩.)

ಬಲ್ಸರಿ ಬಿಱುಸರಿ ಪೆರ್ಮೞೆ
ಮೆಲ್ಸರಿ ತುಂತುಱ್ ತುಷಾರಮಿಡುಕುಂಬನಿ ತಂ ।
ದಲ್ಸೋನೆ ನಟ್ಟ ಬಡಪಮೆ
ನಲ್ ಸುರಿದುವು ಬಿಡದೆ ಮೞೆಗಳಿರುಳುಂ ಪಗಲುಂ ॥ ೧೯೮
(ಜಗನ್ನಾಥವಿಜಯಂ, ೪-೩೨.)

ಪರಿವ ಮುಗಿಲ್ ಪಳಂಚೆ ಖಚರೀನಿಚಯಸ್ತನತಾರಹಾರವ
ಲ್ಲರಿ ಪಱಿಯಲ್ ಪೊದೞ್ದಿ ಬಿಡುಮುತ್ತು ಘನೋಪಲದೊಂದು ರೂಪದಿಂ ।

---

[1] ಚಕ್ರ (ಅ). [2] ತಾಪ (ಅ.) [3] ವಾಟಿ (ಅ). [4] ಕಣ್ಣರೆ ಮುಗಿದಿರೆ (ಅ).
[5] ನುಣ್ಪಸ (ಅ). [6] ಮೆಯ್ಪೋ (ಅ). [7] ಸಾ (ಅ).

ಸುರಿಯಲನಂತರಂ ಬಱಿಯದಾರವೆಟಲ್ದಪುದೆಂಬ ಚೆಲ್ವನಾ
ವರಿಸಿದುವಂದು ಸಂದಣಿಸಿ ನೀಳ್ದ ಪಯೋಧರವಾರಿಧಾರೆಗಳ್ ॥ ೧೯೯

(ಜಗನ್ನಾಥವಿಜಯಂ, ೪–೩೧.)

ಪುರಮುಂತದ್ವೀಪಮೆಂಬಂತಿರೆ ವಿಪಿನಚರಾನೇಕಪಾನೀಕಮುಂಭಃ
ಕರಿಯೂಥಂ ತಾನಿದೆಂಬಂತಿರೆ ನಗನಿಕರಂ ಪಕ್ಷಕುತ್ಕೀಳಮೆಂಬಂ ।
ತಿರೆ ಮತ್ತಂ ಲೋಕಮೇಕಾರ್ಣವಮೆನಿಸಿದುದೆಂಬಂತಿರೆತ್ತೆತ್ತಲುಂ ಕಾ
ಲ್ಪುರಮಾದಂ ಕೊರ್ವಿ ಬಿರ್ದಂ ಕಱೆದುದು ಬಹಳಾಸಾರಮಂ ನೀರದೌಘಂ ॥

(ಚಂದ್ರಪ್ರಭಪುರಾಣಂ, ೪–೪೧.)

ಬಱಬಱನಾಗಿ ತಾಳಿಸಿದುದುರ್ವರೆಯಂ ರವಿ ಸುಟ್ಟನೆಮ್ಮನಿಂ
ತಱಗುಲಿಯೆಂದು ವಾರಿದಕೆ ಮುಟ್ಟಿಸಿ ಪುಯ್ಯಲನಿಕ್ಕುವಂದದಿಂ ।
ಟಱಟಱ ಱೊಂಕು ಱೊಂಕುಟ ಟಱಟ್ಟುಱ ಱಟ್ಟುಱಯೆಂದುಮೆತ್ತಲುಂ
ಕೆಱೆಕೆಱೆ ಬಾವಿಬಾವಿ ತೊಱೆಪೆರ್ದೊಱೆದಪ್ಪದೆ ದರ್ದುರವ್ರಜಂ ॥ ೨೦೧

(ಅನಂತನಾಥಪುರಾಣಂ, ೯–೧೨.)

ಅಡದೊರ್ಂದೊಂದಱ ಬೆನ್ನಂ
ಪಡಿಮೊಗದಿಂ ಪತ್ತಿಕೊಂಡು ವಿಷಯಾತುರದಿಂ ।
ಗಡಗರ್ಬಕು ಗಬಕುಱೆಪಕೆಂ
ದೊಡನೆಂದುವು ಕಾರಗಪ್ಪೆ ಕೆಱೆಗಳ ತಡಿಯೊಳ್ ॥ ೨೦೨

ಮೊಲ್ಲೆ ಮುಗುಳ್ತುದಂದು ಗಿರಿಮಲ್ಲಿಗೆ ಮೆಲ್ಲನರಲ್ದುದಂದು ಕಂ
ಕೆಲ್ಲಿ ಪಸುರ್ತುದಂದು ಬಿದಿರೊಳ್ ಕುಡಿ ಮೂಡಿದುವಂದು ಕೆಂದಳಿರ್ ।
ಸಲ್ಲಕಿಗಾದುದಂದು ರಸವೇಱಿದ ನೇಱಿಲ ದೋರೆವಣ್ಗಳಂ
ತಲ್ಲುಗುತಂದುವಂದು ತಲೆದೋಱಿದುವಂದು ಶಿಲೀಂಧ್ರಕಂದಳಂ ॥ ೨೦೩

ತಿರುವಿಲ್ಲದ ಸುರಧನುವಂ
ಸುರಭಿಶರಂ ಪಿಡಿದು ಗೆಲ್ದು ಭೂಪರ ಕೊಡೆಯಂ ।
ಪಿರಿದಿನಿತೆಂದುಂ ರತಿಪತಿ
ವಿರಚಿಸಿದಂತಿರ್ದುವೆಟ್ದು ಕಳ್ಳನ ಕೊಡೆಗಳ್ ॥ ೨೦೪

ಹಿಮರೋಚಿಃಕಳಿಕಾಕದಂಬಕಮನಿಂಬಿಂ ತಿರ್ದಿ ಮೇಳೈಸಿ ಕುಂ
ಕುಮದಿಂ ಭಾವಿಸಿ ಚಂದನಾಂಬುಗಳ ನೀರಂ ಪೊಯ್ದು ಹಾರೀತರ ।

ತ್ನಮು[1]ಯೀಶು[1]ಕ್ತಿಯೊಳೊತ್ತಿ ಬಯ್ತನಜನೆಂಬಂತಾಯ್ತು ಹೂತೇಟ್ಟೆ[2]ಯಿಂ[2]
ಸುಮನಸ್ಸಾಯಕ[3]ಶಸ್ತ್ರನಾಭರಣ[3]ಮಾ [4]ಸಂ[4]ಕೇತಕಂ ಕೇತಕಂ ॥ ೨೦೫

(ಅನಂತನಾಥಪುರಾಣಂ, ೯–೧೪.)

ಕುಸುಮಾಸ್ತ್ರಪ್ರಥಿತಾಜ್ಞೆಯಂ ತಲೆಯೊಳಾಂಪಂ ತನ್ನ [5][ನಾ][5]ರಿಂತಿದಂ
ಬಿಸುಟಂ ಬೂದಿಯ ಜೋಗಿ ಭೂತಗಣನಾಥಂ ಚರ್ಮವಾಸಂ ಕಪ ।
ರ್ದಿ ಸಮಂತೆಂದು ಮಧುಪ್ರಮತ್ತತೆ ಕರಂ ತಳ್ಪೊಯ್ವಿನಂ ಬೈದು ಪಾ
ಡಿಸುವಂತಿರ್ದುದು ಬಂದ ಕೇದಗೆ ನದದ್ಭೃಂಗಾಳಿಯಿಂ ಶೂಲಿಯಂ ॥ ೨೦೬

ಎಱಗದೆ ತಮ್ಮೊಳ್ ಮಧುಕರ
ನೆಱಗಿರೆ ಕೇದಗೆಯೊಳೆಯ್ದೆ ಕಂಬನಿವಡೆಯಂ
ಕಱೆವಂತಿರೆ ಕಟಿವೂಗಳ್
ನೆಱೆ ಬೀತುವು ಸುರಗಿ ಹೊನ್ನೆ ಮಲ್ಲಿಗೆ ಬನದೊಳ್ ॥ ೨೦೭

(ಜಗನ್ನಾಥವಿಜಯಂ, ೪–೪೫.)

ಬಡಪಂ ಬೆಂಬತ್ತೆ ಮೇಪಂ [6]ತೊ[6]ಱೆದು ಬಿಡದೊಡಲ್ ಕೂಡಿ ತನ್ನಿಚ್ಚೆಗೆ[7]ಟ್ಟೊ
ಳ್ದೊ[7]ಡೆಯೊಳ್ ಬೆಚ್ಚಂತೆ ಬಾಲಂ ನಿಲೆ ನ[8]ವಿರೊ[8]ಡೆದುರ್ವೆಟ್ಟು ಬೆಂಡಾಗಿ
[ಕಾಲೊಳ್ ।
ನಡುಕಂ ಮ್ಯೆವೆರ್ಚೆ ಗಂಟಲ್ ಕುಸಿದು ಕಿವಿಯೆಟಲ್ತಂದು ನಿಂದಿರ್ದುದೋರೊಂ
ದೆಡೆಯೊಳ್ [9]ನಾನಲ್ಗ[9]ಳೊತ್ತಂಬಿಡಿದು ಮೃಗಮೃಗೀವೃಂದವೋರಂದದಿಂದಂ ॥

(ಚಂದ್ರಪ್ರಭಪುರಾಣಂ, ೪–೪೭.)

ಹೆಟಿವುಗೊಳಿಸಿತ್ತು ಜನಮಂ
ಮಟೆಗಾಲಂ ತೀವ್ರಪವನನಿಂ ದುರ್ದಿನದಿಂ ।
ಮೊಟಗಿಂ ಮಿಂಚಿಂ ಸಿಡಿಲಿಂ
ಮಟೆಯಿಂ ದೆಸೆದೆಸೆಗೆ ಪರಿವ ಪೊನಲಿಂ ಕೆಸಱಿಂ ॥ ೨೦೯

ಇನನಿದಿರೇಟ್ವ ಕಾರ್ಮುಗಿಲ ಬಾಧೆಗೆ ಬಿಟ್ಟನೊ ತಳ್ತ ಬಳ್ಳಿಮಿಂ
ಚಿನ ಬಲೆಯಲ್ಲಿ ಸಿಲ್ಕಿದನೊ ಪೋಯ್ವ ಸಿಡಿಲ್ಗೊಳಗಾಗಿ ನಿಂದನೋ ।
ಘನಜಲಧಾರೆಯೊಳ್ ಕರಗಿಪೋದನೊ ತನ್ನನೆ ಕಾಣನೆಂದು ಪ
ದ್ಮಿನಿ ನಲವೋಡಿ ತನ್ಮಧುಕರಧ್ವನಿಯಿಂದೆ ಪಲುಂಬಿ ಪಾಡಿದಳ್ ॥ ೨೧೦

---

[1] ಯಾಸೂ (ಖ.ಬ). [2] ಯೊಳ್ (ಅ). [3] ನಸ್ತ್ರಸೌರಭರ (ಅ). [4] ಸಾ (ಅ). [5] ದಾ (ಕ.ಖ.ಬ). [6] ಮೆ (ಅ). [7] ಟ್ಟಿರ್ದ (ಕ.ಖ.ಬ). [8] ಲಿವೊ (ಕ.ಖ.ಬ). [9] ತಾಱಲ್ಗ (ಅ).

ಅವಿ[1]ಶಾಲಾ[1]ಂಬರವಪ್ರಸನ್ನ ದಿವವಸ್ಪಷ್ಟಾಧ್ವವಸ್ವಚ್ಛತೋ
ಯವನುದ್ಯೋಗಜನೌಘವಸ್ತದವವಸ್ಮೇರಾಬ್ಜವತ್ಲಕ್ಷಣಕ್ಕೆ ।
ರವವಕ್ರೀಡಿತಹಂಸವಸ್ಫುರಿತ ಚಂದ್ರಾದಿತ್ಯವಶ್ಲಿಷ್ಟಕೋ
ಕವಯೂನಾಧ್ವಗವಸ್ವರಾನ್ಯಭೃತವಂದೊಪ್ಪಿರ್ದುದಭ್ರಾಗಮಂ ॥ ೨೧೧

(ಜಗನ್ನಾಥವಿಜಯಂ, ೪–೨೬.)

ಕೆಸಱೊಳ್ ಜಾಱುವ ಜಾಱಿ ಬೀೞ್ವ ಮೞೆಯೊಳ್ ಮ್ಯೆನಾಂಬ ನಾಂದೊಚ್ಚತಂ
ಬಸಿಯುತ್ತಿರ್ಪ ಜನಂಗಳಂ ಸುರತಲೀಲಾಗೇಹನಿರ್ಪ್ಯೂಹ[2]ದು ।
ದ್ದೆಸನೊಳ್ ತಟ್ಟಿಸಿ[2] ಸಂತಮಿರ್ದಿನಿಯರೋರೊರ್ವರ್ಗೆ [3]ಕಣ್ಣೆತ್ತಿ[3] ತೋ
ಱಿ ಸಖೀಸಂಗ[4]ತ[4]ಹಾಸ್ಯದಿಂ ನಲಿಯೆ ರಯ್ಯಂ ತತ್ಪಯೋದಾಗಮಂ॥ ೨೧೨

ಪರೆದ ಕಚಂ ಮುಗಿಲ್ ಕರತಳಾಹತಿಯಿಂ ಪಱಿದೊಕ್ಕ ಮೌಕ್ತಿಕಾ
ಭರಣದ ಮುತ್ತು[5]ಮಾ[5]ಲಿವರಲಾ ಸುಗಳಧ್ವನಿ ಮೇಘನಿಸ್ವನಂ ।
ಸುರಿವ ಬೆಮರ್ ತಗುಳ್ವ ಮೞೆ ಕಾಮರಸಂ ಪೊನಲಾಗೆ ಕಾದಲರ್
ನೆರೆವೆಡೆಯೊಳ್ ಮನೋಭವನ [6]ಸೃ[6]ಷ್ಟಿವೊಲಾದುದದೊಂದು ಕಾರ್ಮೊಗಂ॥ ೨೧೩

ಬಂದಪೆನೆಂದು ಪೋದನಿನಿಯಂ ಜಲದಾಗಮನಕ್ಕೆ ಕಾರ್ಮುಗಿಲ್
ಬಂದುದು ಶಕ್ರಚಾಪಲತೆ ಬಂದುದು ಪೆರ್ಚಿದ ಸೋಗೆಯಿಂಚರಂ ।
ಬಂದುದು ಚೆಲ್ವುವೆತ್ತು ನಭದೊಳ್ ಪೊಳೆದೊಪ್ಪುವ ಬಳ್ಳಿಮಿಂಚು ತಾಂ
ಬಂದುದು ಬಂದನಿಲ್ಲ ಪತಿಯೆಂದು ಲತಾಂಗಿ ಪಲುಂಬಿ ಪಾಡಿದಳ್ ॥ ೨೧೪

ಇನಿಯಂ ಬಾರದೆ ಮಾಣ್ದನಿನ್ನೆವರನಿನ್ನೀಂ ಕಾರಿರುಳ್ ಪೋಗಿ ಕಾ
ಮನ ಸಾಮ್ರಾಜ್ಯವನಟ್ಟಿದಪ್ಪ ಮುಗಳೇ ಕಾಱ್ಪೂರದೊಳ್ ಕುಂಗೆ ಮಿಂ ।
ಚಿನ ಕಣ್ಣೀಱಱಿದಾಗದೊರ್ಮ್ಮಿಡಿಯೆ ಭಿನ್ನಂ ಚಾಪವೃತ್ತಸ್ತನಂ
ಸ್ತನಿತಕ್ಕೊಡ್ಡಿಸಲಾರ್ಪವೇ ಮೞೆಯೊಳೇಱುಂಜವ್ವನಂ ನಾನದೇ ॥ ೨೧೫

ಬಱಸಿಡಿಲೇೞ್ಗೆ ಸುತ್ತುಱಿದ ಕಟ್ಟಲೆ ಕಾರ್ಮುಗಿಲೊಡ್ಡು ಬಂದುಬಂ
ದೆಱಗುವ ಬಲ್ಲಿತಪ್ಪ ಸರಿ ಕಂಗಳೊಳುಣ್ಮುವ ಮಿಂಚು ಮಾಣದ ।
ಳ್ಕುಱೆ ಗಜಱುತ್ತಮಿರ್ಪ ಘನಗರ್ಜನೆಯೆಂಬಿವು ಕಾತರತ್ವಮಂ
ಮಱೆಯಿಸಲೆಂತುಮಾಱವು ನಿಜೇಶ್ವರನಲ್ಲಿಗೆ ಪೋಪ ನಲ್ಲಳಾ ॥ ೨೧೬

(ಶೃಂಗಾರರತ್ನಾಕರಂ, ೩–೬೧.)

---

[1] ಳಾಸಾಂ (ಖ.ಬ). [2] ಮದ್ವೆಸದೊರಳ್ಚಿಸಿ (ಕ) ಮದ್ವೆಸದೊತ್ತಳ್ಕಿಸಿ (ಖ.ಬ). [3] ಕಣ್ಗೆತ್ತಿ (ಕ), ಕಂಗೆತ್ತಿ (ಖ.ಬ). [4] ದ (ಖ.ಬ). [5] ವಾ (ಗ.ಘ). [6] ವೃ (ಗ.ಘ).

ತಳದರ್ಾತ್ಮಾಲಯದಿಂದಿರುಳ್ ಸುಟಿವ ಜಾರಸ್ತ್ರೀಯ ವಕ್ತ್ರೇಂದುವಂ
ಚಳವಿದ್ಯುನ್ನಯನಾವಲೋಕ[1]ನದೆ[1] ಕಂಡನ್ಯಾಯಮಾಯ್ತೀ ವಿಯ ।
ತ್ತಳಚೂಡಾಮಣಿ ಚಂದ್ರ[2]ನೇಂ[2] ಕಱಿದ[3]ನೀ[3] ವರ್ಷಾಂಬುವಂ ಕೂಡೆ ಭೂ
ವಳಯಕ್ಕಿಂ[4]ದುಲಿ[4]ವಂತದೇಂ ಮೊಟಗಿತೋ ಮೇಘಂ ನಿಶೀಥಂಗಳೊಳ್ ॥ ೨೧೭

(ಜಗನ್ನಾಥವಿಜಯಂ, ೪–೨೮.)

ಭವಲಾಲಾಟವಿಲೋಚನಾಗ್ನಿಶಿಖೆಯಿಂ ಬೆಂದಳ್ಕಿ ಮತ್ತಂ ಮನೋ
ಭವನೆಟ್ಟುತ್ತೊಡೆ ಕಾಮಕಾಂತೆ ಬಟಿಯಂ ತನ್ನಿಚ್ಛೆಯಿಂ ಮೆಚ್ಚಿ ಬ ।
ಣ್ಣವುರಂ ತೀವಿದ ಮಾಡ್ಕೆಯಾಯ್ತು ನ[5]ವಿಲಿಂ[5] [6]ತಂದಲ್ಗಳಿಂ[6]ದಿಂದ್ರಗೋ
ಪವಿಳಾಸಂಗಳಿನಾಲಿಕಲ್ಲ ಪರ[7]ಪಿಂ[7] ಕಾರೊಳ್ ಮಹೀಮಂಡಳಂ ॥ ೨೧೮

(ಪಂಪಭಾರತಂ, ೭–೨೪.)

ಮೊಳೆವುಲ್ ಮೆಯ್ನವಿರಾಲಿ ಲೋಲನಯನಂ ಗೀರ್ವಾಣಬಾಣಾಸನಂ
ನಳಿತೋಳಾಡುವ ಸೋಗೆ ಸೋರ್ಮುಡಿ ಪೊನಲ್ ರೋಮಾಳಿ ಮಿಂಚೋಲೆವೊಲ್ ।
ಜಳದಂ ಪೆರ್ಮೊಲೆ ಶಕ್ರ[8]ಗೋ[8]ಪಮಧರಂ ತಾನಾಗೆ ಕಾರೆಂಬ ನ
ಲ್ಲಳೆ ಬಪ್ಪಂತತಿಕಾಮುಕರ್ಗೆ ಮನದೊಳ್ ಮಾಡಿತ್ತತಿಪ್ರೀತಿಯಂ ॥ ೨೧೯

ಕಡವಲರ್ದುವು ಮೊಲ್ಲೆಯ ಪೂ
ಗುಡಿ ನಿಮಿರ್ದುವು ಸೋಗೆ ಕೇಗಿದುವು ಕೇದಗೆ ಬೆ ।
[9]ಳ್ಪೊಡೆ[9]ವೋದುವು ಚಾದಗೆಗಳ್
ಕಡಂಗಿ ನುಂಗಿದುವು ತೋರವನಿಯಂ ಕಾರೊಳ್ ॥ ೨೨೦

(ರಾಮಚಂದ್ರಚರಿತಪುರಾಣಂ, ೨–೫೨.)

ನಿಳಯದ ಸೂರ್ಗಳೊಳ್ ತರದೆ ಮುತ್ತಿನ ಸೂಸಕದಂತೆ ನಂದನಂ
ಗಳ ತರುಪತ್ರದೊಳ್ ಮುಕುಳಮಂಜರಿಯಂತೆ ಚರತ್ಪುರಾಂಗನಾ ।
ವಳಿಯ ಕುರುಳ್ಗಳೊಳ್ ತಳಿದ ಸೇಸೆಗಳಂತೆಳವುಲ್ಗಳೊಳ್ ಘನೋ
ಪಳಕುಳದಂತೆ ತೋಱಿದುವು ನವ್ಯಘನಚ್ಯುತ ತೋಯಬಿಂದುಗಳ್ ॥ * ೨೨೧

(ಜಗನ್ನಾಥವಿಜಯಂ, ೪–೧೯.)

ಸುರಗೋಪಂಗಳುಮಾಲಿಕಲ್ಲುಮೆಳವುಲ್ಲುಂ ಕೆಂಪಿನಿಂ ಬೆಳ್ಪಿನಿಂ
ಹರಿತಚ್ಛಾಯೆಯಿನಲ್ಲಿಗಲ್ಲಿಗೆಸೆಗುಂ ಮಾಣಿಕ್ಯದಿಂ ಮುತ್ತಿನಿಂ ।

---

[1] ದೊಳೆ (ಅ). [2] ನಂ (ಅ). [3] ನೋ (ಅ). [4] ಬಿನ (ಅ). [5] ಲವಿಂ (ಖ.ಬ). [6] ಕುಂದಂಗಳಿಂ (ಅ). [7] ಲಿಂ (ಅ). [8] ಚಾ (ಕ). [9] ಳ್ಗುಡಿ (ಅ).
* ಈ ಪದ್ಯ (ಕ) ಪ್ರತಿಯಲ್ಲಿಲ್ಲ.

ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾಭೂಷಣಾನೀಕಮುಂ
ಧರಣೀವಲ್ಲಭೆಗಂಬುದಾಗಮವಿಟಂ [1]ಕೈಗೆಯ್ಸಿ[1]ದೊಂದಂದದಿಂ ‖ ೨೨೨
(ಜಗನ್ನಾಥವಿಜಯಂ, ೪–೨೦.)

ಕೆಱೆ ಕಾಟ್ಪುರದಿಂ ತೀವಿರೆ
ಕೆಱೆಗಳ ಕಡೆಗೋಡಿ ಪಳ್ಳಮಂ ಪಳ್ಳಂಗಳ್ ।
ತೊಱೆಯಂ ತೊಱೆಗಳ್ [2]ಬಾಂದೊಱೆ
ಯೆಱೆಯನನೊಲವಿಂದೆ ಕೂಡಲಳ್ಕುಱೆ[2] ಪಥಿಕರ್ ‖ ೨೨೩
(ಜಗನ್ನಾಥವಿಜಯಂ, ೪–೩೩.)

ಘನರಾವಂ ಪೊಣ್ಮೆ ಮೀನುಂ ಮೊಸಳೆಯುಮೊಡವಿಟ್ಟೆತ್ತನಲ್ ಮೇಗಣಿಂದಂ
ಬಿನ ಕಟ್ಟಂಬಿಟ್ಟವೋಲ್ ಸಂದಿಸಿಕೊಡಗೊಡದೊಳ್ ಪೊಯ್ದವೋಲಾಗೆ ಭೋಭೋರ್ಭೋ।
ರೆನುತುಂ ಸಂವರ್ತಮೆತ್ತಂ ಜಳಚಳಕುಳದೊಂದಂದದಿಂ ಗೋಕುಲಂ ಬ
ಲ್ಬೊನಲೊಳ್ ತೇಂಕಾಡುವನ್ನಂ ಕಱೆದುವು ಮೞೆಯಂ ನೂತಜೀಮೂತಜಾಲಂ ‖

## ಶರದ್ವರ್ಣನಂ

ತೊಲಗದ ಮೋಡವೋಡಿದುದು ತಂದಲಗುಂದಲೆಯಾಯ್ತು ಮೇಘಮಂ
ಡಲವಳಱಿತ್ತು ಮಿಂಚುವೆಳಗುಂ ಬಱಿಮಾಯ್ತು ಶಿಖಂಡಿ ತಾಂಡವ ।
ಕ್ಕಲಸಿದುದಂದು ಕುಂದಲತೆ ಕುಂದಲೊಡರ್ಚಿದುವಂಚೆ ಚಂಚುವಿಂ
ನಲಿದು ಮೃಣಾಳಮಂ ಸವಿದುದಾಯ್ತು ಶರತ್ಪ್ರಥಮಪ್ರವೇಶದೊಳ್ ‖ ೨೨೫
(ಜಗನ್ನಾಥವಿಜಯಂ, ೪–೩೭.)

ಚಾದಗೆಯ ಸೊಕ್ಕು ತೀರ್ದುದು
ಕೇದಗೆಯುಗೆಯೆತ್ತಿಪೋಯ್ತು ಗಿರಿಮಲ್ಲಿಗೆಯಾ ।
ಮೋದಂ [3]ತಳೆದುದು[3] ದರ್ಬಿಸಿ
ಪೋದುದು ನುಣ್ದನಿ [4]ನವಿಲ್ಗೆ[4] ಶರದಾಗಮದೊಳ್ ‖ ೨೨೬

ಮೞೆಯಿನ್ನೆತ್ತಣದೆಂಬಿನಂ ಬೆಳಗುಗುಂ ಬಾನೊರ್ಮೆ ಮತ್ತೊರ್ಮೆ ಪೆ
ರ್ಮೞೆ ಕೊಳ್ಗುಂ ರವಿ ಕೂ[5]ಡೆ[5] ಪಣ್ತು ಮುಗಿಲಿಂ ಸೀಳ್ದಂದದಿಂ ಬಿಸಿಲ್ ।
ಮೞೆ ಕೊಳ್ಗುಂ ಗಿಳಿಸೋವ ಪಾಮರಿಯರಂ ಕೈಮಿಱೆ ನೀರವ್ರಜಂ
ಸುೞಿಗುಂ ಶಾಡ್ವಳಮಾದ ಶಾಳಿವನದೊಳ್ ನೀರಾಜನಂ ಮಾಳ್ಪವೋಲ್ ‖ ೨೨೭

---

[1] ತಂದಿಕ್ಕಿ (ಅ). [2] ತಾಂಬಾಂದೊಱೆಗೊರೆಯೆನಲುರ್ಬೆಪೊಕ್ಕರಟ್ಟುರೆ (ಅ).
[3] ತಳಿತುದು (ಖ.ಬ). [4] ನವೀನ (ಕ.ಖ.ಬ). [5] ಡಿ (ಕ).

ನಡೆದುದು ಬಟ್ಟೆ ಬಟ್ಟೆಯ ಕೆಸಱ್ ಸಱುವಿಟ್ಟುದು ನಂದನಂ ನಯಂ
ಬಡೆದುದು ಪೂಗೊಳಂ ತಿಳಿದುವಭ್ರಪಥಂ ಬೆಳಗಿತ್ತು ಪಳ್ಳವು ।
ಕರ್ಡಿದುದು ಕೂಡೆ ಬೊಂಬೆ ಸಸಿಯಾದುವು ಕೆಯ್ ಪಸುರ್ವೀದ ಪುಲ್ಗಳಂ
ಪಿಡಿದುವು ಶಾಲಿ[1]ಗಾ[1]ಪಿಯರ ಗಾವರಮುಬ್ಬರಮಾಯ್ತು ಸುತ್ತಲುಂ ॥ ೨೨೮

ನೀರದವಿಟಂಗೆ ವಿದ್ಯು
ನ್ನಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ ।
ದೂರಿಸಿ ಬೆಳರ್ತ ತೆಱದಿಂ
ಶಾರದ ಜಳಧರದ ತುಱುಗಲೊಗೆದುವು ನಭದೊಳ್ ॥ ೨೨೯

(ಲೀಲಾವತಿ, ೫—೨೪.)

ಜೀವನಮುಳ್ಳಿನಮಿತ್ತ ಖಿ
ಳಾವನಿಗಂ ಕೀರ್ತಿಶೇಷಮಾಯ್ತು[2]ನಲಂದ[2] ।
ಬ್ದಾವಳಿ ಬೆಳರ್ತು ಬಾನಂ
ತೀವಿದುವು ಪರೋಪಕಾರಿ ಕೆಟ್ಟೊಡೆಯುಂಟೇ ॥ ೨೩೦

(ಲೀಲಾವತಿ, ೫—೨೬.)

ತರದಿಂ ನಲಿನಲಿದಾಡುವ
ಸರಸದ ಮಕ್ಕಳವೊಲಂಚೆಗಳ್ ಮಾನಸದಿಂ ।
ಬರೆ ಮೆಱೆದು ಶರದದವನಿಪ
ನರಮನೆಯಂಗಣಮಿದೆನಿಸಿ ಬೆಳಗಿತು ಗಗನಂ ॥ ೨೩೧

ಪಿಂದೆ ತಲೆ[3]ಗರೆ[3]ದ ಕದಿರ್ಗಳ್
ಸಂದಣಿಗೊಂಡರ್ಕಬಿಂಬದಿಂ ಪೊಱಪೊಣ್ಮಿ ।
ತ್ತೊಂದೊಂದನೊಱಸಿ ಕಿಡಿವಿಡು
ವಂದದೆ ಕಡುವಿಸಿಲ ಪೊಳಪುವಡೆದುದು ಕಾಯ್ಪಂ ॥ ೨೩೨

(ಲೀಲಾವತಿ, ೫—೩೮.)

ಮುನ್ನುಂಗಿ ದಹನನಂ [4]ತಪ
ನನ್ನೆಲಕು[4]ಗುಬ್ಬಂತೆ ಬಿಸುಗದಿರ್ಗಳ್ ನೆಱೆ ಕಾ ।

---

[1] ಗೋ (ಕ.ಖ.ಗ.ಬ). [2] ನೆ ತುಂಗಾ (ಅ.ಕಾ). [3] ದೆಗೆ (ಅ). [4] ದಹನಂ ನುಗುಳ್ವು (ಖ.ಬ).

ಯ್ವನ್ನಂ ಸುಡುತಿರೆ ಪಥಿಕರ್
ಬೆನ್ನಂ ಕೊಂಡೋಡಿ ಮೆಳೆಯ ನೆೞಲಂ ಸಾರ್ದರ್ ॥ ೨೩೩
(ಲೀಲಾವತಿ, ೫–೪೦.)

ತಿಂಗಳ ಯೌವನ ವಿಭವಮು
ನಂಗನ ಸಿರಿಹುಟ್ಟಿದಮೃತವಾರಾಶಿ ಚಕೋ ।
ರಂಗಳ ಕಂಗಳ ಹಬ್ಬಂ
ಶೃಂಗಾರಂಬಡೆದ ಸ್ವೈಪು ಶರದದ ಜೊನ್ನಂ ॥ ೨೩೪

ಅರಗಿಳಿಯ ಹಿಂಡು ಬಂದುಗೆ
ಯರಲಂದದ ಚಂಚುವಿಂದೆ ಕೞಮೆಯ ತೆನೆಯಂ ।
ಬರೆ[1]ತೆಗೆದು ಕರ್ಚಿ ನೆಗೆದುವು[1]
ಶರದಂ ಪುಗೆ ಪಾಱಿ ಪೋಪ ಸುರಚಾಪದವೊಲ್ ॥ ೨೩೫
(ಲೀಲಾವತಿ, ೫–೪೧.)

ಪೊಳೆವ ಬಿಸಿಲ್ಗೆ ಮೆಯ್ವೆಳಗು ಚಂದನಪಾಂಡುಪಯೋಧರಾಗ್ರದಿಂ
ಬಳೆದಿೞಿತರ್ಪ ಬೆಳ್ಸರಿಗೆ ಹಾರಮೆ ಸಾ[2]ಲ್ತಿ[2]ರೆ ಪೋಲ್ವೆಯಿಂ ಸಮು ।
ದ್ದಳಿತಸರೋಜಗಂಧಿ ಕಳಹಂಸಮನೋಹರಯಾನೆ ಸಸ್ಮಿತೋ
ತ್ಪಳಧವಳಾಕ್ಷಿಯೇಂ ಸುರಿದಳೋ ಶರದಂಗನೆ ಕಣ್ಗೆ ಶೋಭೆಯಂ ॥ ೨೩೬
(ಲೀಲಾವತಿ, ೫–೪೨.)

## ಹೇಮಂತವರ್ಣನಂ

ಅರೆವಸುರಾಯ್ತು ಹುಲ್ಲೆಸೆಯೆ ನಿಂದುವು ಕಾಯ್ ಪೊಡೆ ಕೊಯ್ಯಲಾಯ್ತು ಬಂ
ಧುರತರ ಶಾಳಿ ನೀರಱಿಕೆ ತೊಟ್ಟನೆ ಮಾಣ್ದುದು ಚಂದನಕ್ಕೆ ಮೆ ।
ಯ್ಯರಸಿದುದಂಗರೇಖೆ ಹೊಱಹಕ್ಕಿಗಳೋವರಿವಕ್ಕವಾವಗಂ
ಶರದದ ಮಾತು ಪಿಂಗಿದುದು ಪೊಕ್ಕುದು ಮಾಗಿ ಮಹೀವಿಭಾಗದೊಳ್ ॥ ೨೩೭

ಅಣಿಯುರಮಾಡಿ ಮೂಡಗಡಲೊಳ್ ತೆರೆಮಾಲೆಯನೆತ್ತಿ ದೇವವಾ
ರಣಕರಶೀಕರೋತ್ಕರಮನಾಂತು ಶಚೀರಮಣಾಭಿಷೇಕವಾಃ ।
ಕಣನಿಕುರುಂಬಮಂ ತಳೆದು ಬಂದೆಸಗಿತ್ತತಿಶೈತ್ಯಕಾರಣಂ
ಪ್ರಣಯವಿಮುಕ್ತವಲ್ಲಭವಿದಾರಣನಿಂದ್ರದಿಶಾಸಮೀರಣಂ ॥ ೨೩೮
(ಜಗನ್ನಾಥವಿಜಯಂ, ೧೪–೪.)

---

[1] ಕರ್ಚಿ ಪಾಱುತಿರ್ದುವು (ಅ). [2] ೩ಿ (ಖ.ಬ).

ಗಗನಂ ದಿಗ್ವಳಯಂ ದಿನೇಶ[1]ವಳಯಂ[1] ಶೈಲಾಳಿ ತೋಯಾ[2]ಶ[2]ಯಂ
ನಗರಂ ನಂದನಮೆಂಬ ವಸ್ತುಗಳನಾರುಂ ಕಾಣದಂತಾಗಿ ತೊ ।
ಟ್ಟಗೆ ಕಣ್ ವಂಚಿಸಿ ನುಂಗಿ ತೋರ್ಪ ಚಪಲಂ ಹೇಮಂತಮೆಂಬಿಂದ್ರಜಾ
ಲಿಗನಿರ್ದೂದಿದ ಧೂಮದಂತಸದಳಂ ಪರ್ಬಿತ್ತು ಮಂಜೆತ್ತಲುಂ ॥ ೨೩೯

ಬಿಟ್ಟು ಸರೋಜಮಂ ಕುವಲಯಕ್ಕಡಿಯಿಟ್ಟುದು ತುಂಬಿ ಜಾತಿ ಕಂ
ಪಿಟ್ಟುದು ದಿಕ್ತಟಂಗಳನಶೇಷ ನದೀನದ ನಿರ್ಝರಾಂಬು ರೂ ।
ಪಿಟ್ಟುದು ಚಂದ್ರಕಾಂತಹಿಮವಾರಿಗೆ [3]ಚಿಂತಿ[3]ಸಿ ಜಕ್ಕವಕ್ಕಿ ಸಾ
ಲಿಟ್ಟುದು ಕಣ್ಣ ನೀರನೆನೆ ಮಾಗಿ ಬರಲ್ ಮೊದಲಿಟ್ಟುದೆಂಬಿನಂ ॥ ೨೪೦
(ಜಗನ್ನಾಥವಿಜಯಂ, ೧೪-೬.)

ಮುಗಿಯೆ ಕರದ ಕಂಜಂ ವಾಜಿಗಳ್ ಸುರ್ಕೆ ಸೂತಂ
ಸುಗಿದು ಪೆಟವನಾದಂತೈಕಿಲಿಂ [4]ಹೊನ್ನ[4]ರಂಗಳ್ ।
[5][ತ][5]ಗೆಯೆ ರಥದ ಕೀಲಂ ಕಿಟ್ಟು ಪೊತ್ತಿಕ್ಕೆ ಕಣ್ಣೊಳ್
ಪುಗೆ ಪೊಗೆ ರವಿಸಾರ್ತಂದೂದುವಂ ಪೋಪ ಕಿಚ್ಚಂ ॥ ೨೪೧
(ಲೀಲಾವತಿ, ೯-೬.)

ಮಾಸರಮೆನೆ ಪಾರದದಿಂ
ಪೂಸಿದವೊಲ್ ಪೊನ್ನ ಮುಕುರಮಂ ಹಿಮಲಿಪ್ತಂ ।
ನೇಸಱಬಿಂಬಂ ತಿಂಗಳ
ಕೂಸಿನವೊಲ್ ಮೂಡುತಿರ್ಪುದಂದಿನ ದಿನದೊಳ್ ॥ ೨೪೨
(ಲೀಲಾವತಿ, ೯-೮.)

ಹಿಮಮನಲರ್ಚಿ ತೀಡೆ ಪವನಂ ವನಮಾಲೆಗೆ ಪೋಯ್ತು ವಿಭ್ರಮಂ
ಭ್ರಮ[6]ರನಿಷೇ[6]ವ್ಯಮಾಯ್ತು ಕುಮುದಂ ಮುದಮಂ ಪಡೆದತ್ತು ಪಣ್ತ ಕ ।
ರ್ಬಮೃತರಸಾವಿಳಂ ವಿಳಯಮೆ[7]ಯ್ದಿದುದಬ್ಜ[7]ವನಾಳಿ ನಾಳಿಕೇ
ರಮನವಳಂಬಿಸಿರ್ದುವು ಫಲಂ ರಸಪೂರಿತಮಾಗಿ ಮಾಗಿಯೊಳ್ ॥ ೨೪೩
(ಜಗನ್ನಾಥವಿಜಯಂ, ೧೪-೫.)

ಗಿರಿತಟದೊತ್ತುಗೊಂಡು ಮೃಗಸಂಕುಲಮಿರ್ದುವು ಜೀರ್ಣಕೋಟರಾ
ವರಿತಟದೊತ್ತುಗೊಂಡು ಖಗಸಂಕುಲಮಿರ್ದುದು ಮಾಗಿಯೊಳ್ ಸರೋ ।
ವರತಟದೊತ್ತುಗೊಂಡು ಪೊಣರ್ವಕ್ಕಿಗಳಿರ್ದುವು ಕಾಮಿನೀಪಯೋ
ಧರತಟದೊತ್ತುಗೊಂಡು ವಿಟನೀಟಕರಿರ್ದುದು ಮುಂಬಗಲ್ವರಂ ॥ ೨೪೪

---

[1] ಶಶಿಯಂ (ಖ.ಬ). [2] ಸಿ (ಕ). [3] ಮಿಂಚಿ (ಖ ಬ). [4] ಪೆರ್ನ (ಕ.ಖ.ಬ).
[5] ತೆ (ಅ.ಕ.ಖ.ಬ). [6] ರಿಗೆಸೇ (ಖ.ಬ). [7] ಯ್ದುವುದುಂಜ (ಖ.ಬ).

ತಳದುರ್ ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯಂ [1]ತೆರಳ್ದು[1] ತು
ಪ್ಪುಟನೊ[2]ನೆದಂಟೆ[2] ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ ।
ಣ್ಗಳನರೆಮುಚ್ಚಿ [3]ತೋದ[3] ಗಱಿಯಂ ನಸು ಜೋಲಿಸಿ ಪಕ್ಕಿಗಳ್ ಮರಂ
ಗಳ ತುದಿಗೋಡಮೇಲೆ ದನಿಗೆಯ್ಯುತಮಿರ್ದುವು ಮುಂಬಗಲ್ವ[4]ರಂ[4] ॥ ೨೪೫

(ಜಗನ್ನಾಥವಿಜಯಂ, ೧೪–೧೦.)

ಖಂಡಿ[5]ಸಿ[5] ಬಿಸಕಳಿಕೆಗಳಂ
ತುಂಡಂ ಕುತ್ತಱಿಯೆ [6]ಬಿರಿದು[6] ಬಳ್ಕಿಸಿ ತಲೆಯಂ ।
ಕೊಂಡೋಡಿ [7]ಕೊಡಹಿ[7]ಕೊಂಡುವು
ಮಂಡಳಿಸಿದ ಪಕ್ಕ[8]ದಿಂದೆ[8] ಕಳಹಂಸಂಗಳ್ ॥ ೨೪೬

(ಲೀಲಾವತಿ, ೬–೧೫.)

ತುದಿಗೋಡಿಂಗೇಱಿ ಕೊಂಬಂ ಪಿಡಿದು ಜಡಿದು ಪುರ್ವಿಕ್ಕಿಯುಃಪೆಂದು ಮುನ್ನೇ
ಱಿದ ಕೊಂಬಂ ನೋಡಿ ಮೆಯ್ಯಂ ಸುಗಿದುಗಿದುರಮಂ ಪಿಕ್ಕಿ ಪೇನ್ವಿಂಡನಾಯ್ದು ।
ಬಿಽದ ಮೆಯ್ಯಂ ಕಯ್ಯಿನೆತ್ತಂ ತುಱಿಸಿ ಮಱಿಗಳಂ ಸಾರ್ಚಿ ಮುಂದಣ್ಗೆ ಕುಳ್ಳಿ
ರ್ದುದು ಕೋಡಂ ಕೋಡಿ ಹೇಮಂತದೊಳೆಳವಿಸಿಲಂ ಕಾಯಲೆಂದೊಂದು ಧೂರ್ತಂ

ಪಲ್ಗಿರಿದು ಪುರ್ವನುರ್ವಿ ಬೆ
ರಲ್ಗೊನೆಯಿಂ ತುಱಿಸಿ ಬರಿಯ ಸೀರ್ದುಪ್ಪಟ ಬಂ ।
ಬಲ್ಗಳನುಗುರಿಂ ಪಿಕ್ಕಿ ಬಿ
ಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ ॥ ೨೪೮

(ಜಗನ್ನಾಥವಿಜಯಂ, ೧೪–೧೧.)

ಮಱಿಗಳನಿಱುಂಕಿ ಮೋಹದಿ
ನೆಱಂಕೆಯಿಂ ಗೂಡುಗೊಂಡು ಗೂಡಿನೊಳಿ[9]ರುಳೇ[9] ।
[10]ನೊ[10]ಱಗಿರ್ದುದೊ ಕೂಗದೆ ಕಣ್
ತೆಱೆಯದೆ ಕುಕ್ಕುಟ ಕುಟುಂಬಿನೀ ನಿಕುರುಂಬಂ ॥ ೨೪೯

(ಜಗನ್ನಾಥವಿಜಯಂ, ೧೪–೧೫.)

ಪೋಱಮುಟ್ಟು ತೊಱೆಯ ನಡುವಣ
ಕುಱುವಂಗಳ [11]ತಡಿಯೊ[11]ಳಿರ್ದು ಕಾಯ್ದುವು ಬಿಸಿಲಂ ।

---

[1] ತಳದುರ್ (ಖ). [2] ಸೆದುಂದು (ಖ.ಬ). [3] ಕೋಡ (ಕ.ಖ.ಬ). [4] ರಲ್ (ಅ). [5] ಸೆ (ಅ). [6] ಬಿದಿರ್ದು (ಅ). [7] ತೊಡೆದು (ಅ). [8] ದಲ್ಲಿ (ಅ). [9] ರುಳ್ಳಂ (ಕ.ಖ.ಬ), ರ್ಧದೇಂ (ಅ). [10] ಪೊ (ಕ.ಖ.ಬ). [11] ಕೆಲಧೊ (ಅ).

ಮಱುಗಳ್ ಪಕ್ಕಂ [1]ಬೆಂಬಿಡ
ದೊಱಗಿರೆ[1] ಕುಂಭೀರ ಕಮಠ ಕರ್ಕಟಕಂಗಳ್ ‖ ೨೫೦
(ಜಗನ್ನಾಥವಿಜಯಂ, ೧೪–೧೨.)

ನಂದುವ ಪುಲ್ಲ ಕಿಚ್ಚಿನೊಳೆ ಕಪ್ಪಡಮಂ [2]ಪಱ[2]ದಿಕ್ಕಿ ಪಾಂಥನುಃ
ಪೆಂದಿರದೂದಿ ಪೊಣ್ಮೆ ಪೊಗೆ ಕಣ್ಣೊಳಗಂ ಪುಗೆ ಬಾಷ್ಪ[3]ವಾರಿ[3] ಬೀ ।
ೞ್ತಂದು ತದಗ್ನಿಯಂ ನದಿಪಿದತ್ತಕಟಾತನ ಬೆನ್ನ ಕಪ್ಪಡಂ
ಬೆಂದುದು ಬೆಂದು[4]ವೀೞ್ದುದು[4] ಹಿಮಾನಳ[5]ನಿಂತುಟು ಪಾಪದುಜ್ಜುಗಂ[5] ‖ ೨೫೧
(ಲೀಲಾವತಿ, ೯–೧೯.)

ಪೊಸ[6]ಗಿಚ್ಚಂ ಪುಲ್ಲೊಳ್[6]ಟ್ಟೊದಿದೊಡುರಿದು[7]ರಿ ಕೂರ್ಚಾ[7]ಗ್ರಮಂ ಪತ್ತೆ
[ಕಯ್ಯಿಂ
ಪೊಸೆದುಂ ವಸ್ತ್ರಾಂತದಿಂ ವೋದಿಯುಮುಗುಟ್ಬಿಡೆಯಿಂ ಮೊಕ್ಕಳಂ ನಾಂದಿ
[ಯುಂ ನಂ।
ದಿಸಲೆಂತುಂ ಪಾಂಥನಂದಾಱದೆ [8]ನ[8]ಡುಮಡುವಂ ಪೊಕ್ಕು ಬಿರ್ದ್ದೈಕಿಲಿಂ ಕಂ
ಪಿಸುತಿರ್ದಂ ಪುಲ್ಲ ಕಿರ್ಚುಂ ಪೊಲೆಯನ ಕೆಳೆಯುಂ ಮಾಡದಾವಂಗೆ ಕೇಡಂ ‖
(ಲೀಲಾವತಿ, ೯–೨೦.)

ಗಂಗೆಯ ಸೂಡನಂದುಟಿದು ಸೂಡಿದ ಚಂದ್ರಕಲಾವತಂಸಮಂ
ಪಿಂಗಿಸಿ ಸುಟ್ಟು ಮನ್ಮಥನೊಳಾದ ವಿಭೂತಿಯನೊಟ್ಟಿಕೊಂಡು ವಾ ।
ಮಾಂಗದೊಳಿಟ್ಟು ಪಾರ್ವತಿಯನೀಶ್ವರನಗ್ಗಳಗಣ್ಣ ಬೆಂಕಿಯಿಂ
ಭಂಗಿಸುವಂ ಕುಬೇರಗಿರಿಗಹ್ವರದೊಳ್ ಶಿಶಿರಾತಿರೇಕಮಂ ‖ ೨೫೩

ಕರಿಣೀಪೇಚಕಮಂ ತುಡುಂಕದೆ ವನೇಭಂ ಕಾಮುಕರ್ ಕಾಮಿನೀ
ಪರಿರಂಭಸ್ಪೃಹರಾಸೆಗೆಯ್ಯರೆ ರತವ್ಯಾಪಾರಮಂ ಪುಲ್ಲೆಯಂ ।
ಹರಿಣಂಗಳ್ ನಡೆನೋಡ[9]ವಿಂತು ತುಹಿನವ್ಯಾಘಾತದಿಂ[9] ಬಿಲ್ಗೆ ಕೈ
ದರಲೇನಾಱನೊ ಪೂವಿನಂಬು ತನಗಿಲ್ಲಾಗಿರ್ದನೋ ಮನ್ಮಥಂ ‖ ೨೫೪
(ಲೀಲಾವತಿ, ೯–೪.)

ತಳೆದ ಸುವರ್ಣಭೂಷಣದ [10]ಪೂಸಿದ ಕುಂಕುಮದಿ[10]ಟ್ಟ ರೋಚನಾ
ತಿಳಕದ ರಾಗದಿಂ ಮದನರಾಗಮೆ ಮೂರ್ತಿಯನಾಂತವೊಲ್ ಮನಂ ।

---

[1] ಬಿಡದೆಡೆಗಿಱದಿರೆ (ಅ). [2] ಪಿರಿ (ಅ). [3] ಬಿಂದು (ಅ). [4] ದಾಗಳೆ (ಅ).
[5] ನಂತುಟುಪಾಂಥರುಬ್ಬಸಂ (ಅ). [6] ಪುಲ್ಲೊಳ್ ಕಿಚ್ಚನಿ (ಅ) [7] ಕಚಾಗ್ರಾ (ಅ),
ವಕ್ಷೋಜಾ (ಗ.ಘ). [8] ಕ (ಖ.ಬ). [9] ಲ್ಗೊಲ್ಲವೆ ಹಿಮವ್ಯಾಘಾರದಿಂ (ಅ). [10] ಕುಂ
ಕುಮಪಂಕದೊಳಿ (ಖ.ಬ).

ಗೊಳಿಪೆಳವೆಂಡಿರಂಗಣದ ಹೇಮವಿತರ್ದಿಯೊಳಿರ್ದು ಕಾದರಂ
ದೆಳವಿಸಿಲಂ ಮನಂಬಯಸಿ ಕಾಯೆ ವಿಟಪ್ರಕರಕ್ಕೆ ಮನ್ಮಥಂ ॥ ೨೫೫
(ಜಗನ್ನಾಥವಿಜಯಂ, ೧೪–೯).

ಪಿರಿದುಂ ಕಾರ್ಯಾತುರಂ ಮಾಣದೆ ಕರೆದೊಡಮಿಾ ಬಂದೆನೀ ಬಂದೆನೆಂದೊಂ
ದರೆಜಾವಂ ಕಾಮಿನೀಕರ್ಕಶನಿಬಿಡಕುಚಾಲಿಂಗನಾಲಿಂಗಿತಂ ರಕ್ತವಸ್ತ್ರಾ।
ಸ್ತರಣಂ ಕಾಶ್ಮೀರರಾಗಾವಿಳನತಿಮೃದುಶಯ್ಯಾತಳಂ ನಕ್ತಭೀತಾ
ತುರಚಿತ್ತಂ ಕಾಂತನಿರ್ದಂ ಸಹಚರಗಮನೋದ್ಯೋಗ[1]ಭಂಗಂ[1] ಭುಜಂಗಂ ॥

ಅಡಿಯಡಿಯೊಳ್ ತೊಡೆ ತೊಡೆಯೊಳ್
ನಡು ನಡುವಿನೊಳುರಮುರೋಜದೊಳ್ ತೋಳ್ ತೋಳೊಳ್ ।
ತೊಡರ್ದಿರೆ ಬಾಯ್ವಾಯೊಳ್ ಮನ
ಮೊಡಕಿನೊಳಿರೆ ಮಾಗಿಗೀಗಿಯೇಗೆಯ್ದಪುದೋ ॥ ೨೫೭

ಒಕ್ಕುಡಿತೆಗಂಗಳಬಲೆಯು
ಸುಕ್ಕುಂಗುರುಳವಳ ಪಲ್ಲವಾಧರದವಳಂ ।
ಕಕ್ಕಸಕುಚದವಳಂ ತಾಂ
ತಕ್ಕೈಸಲು ಮಾಗಿಗೀಗಿಯೇಗೆಯ್ದಪುದೋ ॥ ೨೫೮

ನೆಲವಾಸು ತಂಬುಲಂ ಪೆ
ರ್ಮೊಲೆಗಳ ಸೞಿಮಿಂಡಿ ಸುಪ್ಪತಿಗೆ ಧವಳಾರಂ ।
ಕೆಲದ ಸಿಗಳಿಗೆಯಿನಿಂಬಿಂ
ಸಲೆ ಸವಿಪೊಡೆ ಮಾಗಿಗೀಗಿಯೇಗೆಯ್ದಪುದೋ ॥ ೨೫೯

ಗಳರವಮಾಗಿ ಮುದ್ದುಮೊಗಮಾಗಿ ದರಸ್ಮಿತನೇತ್ರಮಾಗಿ ಕೋ
ಮಳ ಕಚಮಾಗಿ ಪೀನಕುಚಮಾಗಿ ಸಮುಚ್ಚನಿತಂಬಮಾಗಿ ಸಂ।
ಚಳತನುಮಧ್ಯಮಾಗಿ ತನುಗಂಗಜರಾಗಮುಮಾಗಿ ನೀೞೆಯುಂ
ತೊಳಪುಗುವಂತೆ ಮಾಗಿ ಬರೆ [2]ಬಾನಿಲೆ[2]ಯೆಂಬರೆ ಭೋಗಭಾಗಿಗಳ್ ॥ ೨೬೦

ಅಂಬುಜನೇತ್ರೆಯರ್ಕಳ ಘನಸ್ತನದೊತ್ತು ನಿತಂಬದೊತ್ತು ನು
ಣ್ಪಿಂಬಳವಟ್ಟ ಪೆರ್ದೊಡೆಗಳೊತ್ತು ಭುಜಂಗಳ ತಣ್ಪಿನೊತ್ತು ಬಿಂ।
ಕಂಬಡೆದಿರ್ದ ತೆಳ್ಗದಪಿನೊತ್ತು ವಿಟರ್ ನೆಱೆ ಕಾವುದಲ್ಲದೀ
ಕಂಬಳಿ ದಟ್ಟಿ ಬೂರವಡವೆಂಬಿವು ಕಾವುವೆ ಶೀತಕಾಲಮಂ ॥ ೨೬೧

---

[1] ಕುಂಭಾ (ಖ.ಬ). [2] ಬಾಗಿಲ (ಖ.ಬ). ಮಾಗಿಲ (ಗ.ಘ).

ನೆನೆಯುಲೊಡನೆತ್ತಿ ಮನದೊಳ್
[1]ತನುಗಿಟ್ಟಿಂ[1] ಹಿಮವನೋಡಿಸುವ ನವಯುವತೀ ।
ಸ್ತನಭರಮಂ ತೆಗೆದಪ್ಪಿದ
ಮನುಜರಿಗೇನರಿವುದರಿದೆ ಮಾಗಿಯ ಮೂಗಂ ॥ ೨೬೨

ಇನಿಸುಗುರ್ವೆಚ್ಚನಪ್ಪುಣಿಸು ಕುಂಕುಮದ[2]ಣ್ಪು[2] ಕದಂಬದಂಬುಲಂ
ಕನಕವಿಭೂಷಣಾಳಿ ಪೊಸ ಜಾದಿಯ ಪೂ ಧವಳಾರವಟ್ಟ[3]ಜಿಂ[3] ।
ಜನಿಯಿ[4]ಸಲಂಚೆ[4]ವಾಸುಗಳೊಳೋಪಳ ಪೆರ್ಮೊಲೆವೆಂಕೆಯಿಂದದೇಂ
ತನತನಗಿಕ್ಕಿ ಮೆಟ್ಟಿದುದೊ ಭೋಗಿಜನಂ ಶಿಶಿರಾತಿರೇಕಮಂ ॥ ೨೬೩

(ಜಗನ್ನಾಥವಿಜಯಂ, ೧೪-೧೯.)

ಕೃತಶೀಘ್ರಸ್ನಾನರಾವರ್ತಿತವಿಕೃತಕರಾಕೃಷ್ಟವಸ್ತ್ರಾಂತರಾವಿ
ಸ್ಮಿತಗರ್ಭರ್ ಗದ್ಗ[5]ದೋಚ್ಚಾರಿ[5]ತ ಜಪಮುಪಸಂಜಾತರೋಮಾಂಚಮಾಕುಂ ।
ಚಿತಗಾತ್ರರ್ ವಹ್ನಿಸಂದೀಪನಪಟುವಟುದತ್ತೇಕ್ಷಣರ್ ನೀರತೀರ
ಸ್ಥಿತರಿರ್ದತ್ತಂದು ವೈಭಾತಿಕವಿಧಿವಿಹಿತಾಘೋಘಮಾಘಂ ದ್ವಿಜೌಘಂ ॥ ೨೬೪

(ಲೀಲಾವತಿ, ೬-೨೫.)

ಬಿಸಿಬಿಸಿಯೋಗರಂ ಕೆಲದ ಸೋಡಗೆತೆಳ್ಳೊಳುದುಪ್ಪುಮುಪ್ಪುಗಾಯ್
ಮೊಸರಿನಿದಪ್ಪ ಮಜ್ಜಿಗೆ ನಿವಾತದ ಶಯ್ಯೆ ಕದಂಬದಂಬುಲಂ ।
ರಸಿಕರ ಗೋಷ್ಠಿ ಬಟ್ಟವೊಲೆಯೋಪಳ ತಳ್ತಮರ್ದಪ್ಪು ತಾವೆ ಬ
ಗ್ಗಿಸದೆ ಹಿಮಾಗಮೋಕ್ತಿಕ [6]ಜಡೋ[6]ದಯಮಂ ಸುಕೃತಾತ್ಮರಪ್ಪರಾ ॥ ೨೬೫

ರವಿರುಚಿಯಂ ಹಿಮಾಂಶುರುಚಿಯೆಂದು ಚಕೋರಚಯಂಗಳೀಂಟುತಿ
ರ್ಪುವು ಬಡಬಾಗ್ನಿಯಂ ಪವಳಮೆಂದಿರದಂಬುಚರಂಗಳೊಂದಿ ನಿ ।
ಲ್ಪುವು ಹರಭಾಳಲೋಚನಮನಂಗಜನೀಕ್ಷಿಸಿ ರಕ್ತಚಂದನ
ದ್ರವದ ಲಲಾಮಮೆಂದಿ[7]ಟಿಪನೇ[7]ವೊಗಟ್ಟೆಂ ಶಿಶಿರಪ್ರಭಾವಮಂ ॥ ೨೬೬

(ಜಗನ್ನಾಥವಿಜಯಂ, ೧೪-೧೮.)

ಎಸೆವಿಂದ್ರಾಶಾಸಮೀರಂ ತೊಲಗಿಸೆ ಕೆಲಸಾರ್ದಂತಿರತ್ಯಂತ ಶೀತ
ಪ್ರಸರಕ್ಕುಳ್ಳಿಕ್ಕಿ ಮೇಣಗ್ನಿಯ ದೆಸೆಗೆಳಸಿರ್ದಂತಿರಾಶ್ಚರ್ಯಮಂ ಪು ।

---

[1] ತನಿಗಿಟ್ಟಿಂ (ಖ.ಬ), ಘನಗಿಟ್ಟಿಂ (ಗ.ಘ). [2] ಣ್ಕೆ (ಅ). [3] ಱಿಂ (ಕ.ಖ.ಗ.ಘ.ಬ). [4] ಸೆಹಂಸೆ (ಕ.ಖ.ಬ). [5] ದಾಚೋದಿ (ಖ.ಬ). [6] ಚರೋ (ಗ.ಘ). [7] ಹನದೇ (ಖ.ಬ).

ಟ್ಟಿಸುತುಂ ತೆಂಕಣ್ಗೆ ಸಾರ್ದರ್ಕನ ಬಿಸುಗದಿರ್ಗಳ್ ಮಾಗಿಯೊಳ್ ತಣ್ಪ ನಾ[1]ಳ್[1]ಲ್
ಬಿಸಿಲಂ ಬೆಳ್ದಿಂಗಳೆಂದೀಕ್ಷಿಸುವುವು ತರಳೋತ್ತಾ[2]ನ[2]ತಾರಂ ಚಕೋರಂ ‖ ೨೬೭

(ಜಗನ್ನಾಥವಿಜಯಂ, ೧೪-೧೩.)

ಓರಂತೆ ಮೆಚ್ಚಿದಂ ಕೃತಿ
ಸಾರಂ ಋತುವರ್ಣನಕ್ಕೆ ಹೊಯ್ಸಳವಂಶೋ |
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ‖ ೨೬೮

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ಋತುವರ್ಣನಂ ದಶಮಾಶ್ವಾಸಂ ಸಂಪೂರ್ಣಂ.

---

1 ಳ್ದ (ಅ). 2 ರ (ಖ.ಬ).

೧

# ವನವಿಹಾರವರ್ಣನಂ

ವನಪಾಲರ್ ಪೇೞ್ವ ಭೂಪರ್ ತರುಣಿಯರೊಡನಾನಂದ[1]ದಿಂದೆ[1]ಯ್ದೆ ಪೋಪಾ
ಬನದೊಳ್ ಪೂಗೊಯ್ವ ಪೂವಿಂ ತು[2]ಡು[2]ಗೆಯನೊಲವಿಂ ಮಾೞ್ಪ ತೂಗುಯ್ಯ
[ಲಂ ಮಾ ।
ವಿನೊಳಾಡುತ್ತಿರ್ಪ ಬೆಟ್ಟೇಱುವ ಮರನಡರ್ವಾ ಕಾವಣಕ್ಕೋಪ ತಂತ
ಮ್ಮಿನಿಯರ್ [3]ಸಯ್ತುಂ[3]ಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ ನಾಡೆ ರಮ್ಯಂ॥

ಅದಿಮುರ್ತ್ತೆಯ ನನೆಯಿಂ ಚೂ
ತದ ಕಳಿಕೆಯಿನೆಸೆವ ಕರ್ಣಿಕಾರದ ಪೂವಿಂ ।
ಕದಳಿಯ ಸುಟಿಯಿಂದೋಲಗಿ
ಸಿದನೋಲಗದೊಳ್ ನೃಪಾಲನಂ ವನಪಾಳಂ ॥ ೨

ಕುರವಕದಂಕುರಂ ತಿಲಕದುಜ್ವಳಪುಷ್ಪವಶೋಕದೊಳ್ದಳಿರ್
ಮರುಗದ ನುಣ್ಗೊನರ್ ದವನದೊಳ್ಗುಡಿ ಮಾವಿನ ಕೆಂದಳಿರ್ ನವಾಂ ।
ಬುರುಹದ ಮೊಗ್ಗೆ ಸಂಪಗೆಯಲರ್ ಸುರಹೊನ್ನೆಯ ಪೂಗಳೆಂಬಿವಂ
ಮುರರಿಪುಗಿತ್ತು ಮೆಚ್ಚುವಡೆದುತ್ಸವದಿಂ ನುಡಿದಂ ಪ್ರಿಯೋಕ್ತಿಯಂ ॥ ೩
(ಜಗನ್ನಾಥವಿಜಯಂ, ೧೪-೪೪.)

ಎಸಗಿದುದೀಗಳೀಗಳಿನಿಸೊಯ್ಯನೆ ತೆಂಕಣಗಾಳಿ ಕೋರಕ
ಪ್ರಸರದೊಳೀಗಳೀಗಳೆಸೆದಪ್ಪುದು ಚೂತಮಹೀಜಮೆಯ್ದೆ ರಾ ।
ಗಿಸೆ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ ಕಂತು ಬಿಲ್ಲನೇ
ಱಿಸಿದಪನೀಗಳೀಗ[4]ಳಿದು[4] ಸುಗ್ಗಿಯದೊಂದು ಪೊಡ[5]ರ್ಪಿದಾಗದೇ[5] ॥ ೪
(ಕಾವ್ಯಾವಲೋಕನಂ, ೩೭೬.)

ಪಗಲೆಲ್ಲಂ ವನಕೇಳಿಯಿಂದಮಿರುಳೆಲ್ಲಂ ಚಂದ್ರಿಕಾಶ್ರೀವಿಳಾ
ಸಗತಾಂದೋಳವಿನೋದದಿಂ ದವತಿ .... .... ದರ್ಪಕಂಗಕ್ಕೆ ಕಂ ।
ತುಗೆ ಮಾಱಾಂತೊಡೆ ಭಾಳನೇತ್ರನುರಿಗಣ್ಣಿಂ ಕಾಮಿನೀಕಾಂತಿವಾ
ರಿಗಳಿಂ ನಂದಿಸಲೆಂದು ಬಂದುದು ಬಸಂತಂ ಸಂತತೋತ್ಸಾಹದಿಂ ॥ ೫

[1] ನಕ್ಕೆ (ಗ.ಫ). [2] ಡಿ (ಖ.ಬ.ಗ). [3] ತ್ಮೈತುಂ (ಗ.ಫ). [4] ಳೆಲೆ (ಅ).
[5] ಪುರ್ಗಾಣ್ಬದಂ (ಕ.ಖ.ಗ.ಫ.ಬ).

ಕೋಗಿಲೆಗಾಯ್ತು ಮಾವಿನೊಳುದೊಂಗಲಿನಿಂ ದನಿ ತುಂಬಿಗಾಯ್ತು ಮೇ
ಲಾಗಿರೆ ಬಂದ ಮಲ್ಲಿಗೆಯ ಸೌರಭದಿಂ ದನಿ ದೇವಸಾಲೆ ತಾಂ ।
ಕೋಗಿಲೆ ಬಂದು ಬಿನ್ನವಿಸಲೆದ್ದುದು ಮಾವು ತಳಿರ್ತ ಭಂಗಿಯಂ
ರಾಗಿಪ ತುಂಬಿ ಬಿನ್ನವಿಸವೇೞ್ದುದು ಮಲ್ಲಿಗೆ ಪೂತ ಭಂಗಿಯಂ ॥ ೭

ಮಾವಿನ ಬಂದ ಮಲ್ಲಿಗೆಯ ಬಾಲತಮಾಳಕುಜಾತಷಂಡಮಂ
ತೀವಿ ತಗುಳ್ದು ಸುತ್ತಿದದಿರ್ಮುರ್ತ್ತೆ ಕವುಂಗಿನ ಸಾಲ ಪಕ್ಕದೊಳ್ ।
ಸಾವುಮನಾಳ್ದು ಸಂಪಗೆ ಮನಕ್ಕೆ ಮನೋಹರಮೆಂಬ ಮಾತೆ ಕೇಳ್
ದೇವರ ಪಾದದಾಣೆ ಬನದೀಸುಳ ಮೈಸಿರಿ ಪೇೞಲಗ್ಗಳಂ ॥ ೭

ಪಿರಿದುಮನಂಗನಾ[1]ದರಿಸಿ[1] ತಮ್ಮನೆ [2]ನೂ[2]ರ್ಗಣೆಮಾ[3]ಡಿ ಪೊಂಗುವಂ
ತಿರೆ ಕಡುನಲ್ಲರಂ ಬಿಗಿಯೆ[3] ತಾಗಿ ಕರಂ ಬಿರಿವಂತೆ [4]ಬೇಗದಿಂ[4] ।
ಬಿರಯಿಯ ಚಿತ್ತಮಂ [5]ತಗುಳ್ದು[5] ನುಂಗಲೆ ಬಾಯ್ದೆಱೆವಂದದಿಂದದೇಂ
ಬಿರಿದುವೊ ತೋರಮಲ್ಲಿಗೆಗಳುಬ್ಬರಮಾಗಿ ಬಸಂತಮಾಸದೊಳ್ ॥ ೮

(ಲೀಲಾವತಿ, ೯–೧೦೪.)

ಮಗಮಗಿಸಲ್ಕೆ ಮಂದಯಿಸಿ ದಿಕ್ತಟಮಂ ಬಟಸಲ್ಕೆ ಪೀರ್ವ ತುಂ
ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳಗಲ್ಕಿದೆ ಸಾಲ್ಗುಮೆಂದು ತ ।
ಳ್ತಗಲದಲಂಪಿನಿಂ ಮಧುಮನೋಭವರಿರ್ವರುಮತ್ತಿವಟ್ಟು ಮ
ಲ್ಲಿಗೆಗೆ ಬಸಂತದೊಳ್ ಬಯಸಿ ಕಟ್ಟಿದರೊಲ್ದಧಿರಾಜಪಟ್ಟಮಂ ॥ ೯

(ಆದಿಪುರಾಣಂ, ೧೧–೧೦೭.)

ಎಕ್ಕಲದುಂಬಿಯಿಂ ಜವಳಿದುಂಬಿಯಿನಟ್ಟುವ ಮಾಲೆದುಂಬಿಯಿಂ
ದಿಕ್ಕುವ ಕುಂಭದಂತೆಸೆವ ಗೊಂದಣದುಂಬಿಯಿನಾವಮೆಯ್ಯೊಳಂ ।
ಮೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ
ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್ ॥ ೧೦

ಭುವನದೊಳೆಮ್ಮ ಮುಟ್ಟದಲರಾವುವೆಱಂಕೆಯ ಗಾಳಿ ಮುಟ್ಟೆ ಕಂ
ದುವುವೆಸಪೊರ್ಮೆ ಪೀರಲೊಡಮಾಗಳೆ ಸೋರ್ವುವು ಕಂಪು ಸೋಂಕೆ ಕಂ ।
ದವು ದಳಮೆಯ್ದೆ ಪೀರೆ ತವದುಣ್ಮುವ ಸೌರಭಮೆಂದು ಪೀರ್ದು ಪೀ
ರ್ದವಚಱದೇಂ ತೆಱಿಂದಿರಿದು ಪಾಯ್ದುವೊ ಕೇದಗೆಯೊಳ್ ಮದಾಳಿಗಳ್ ॥ ೧೧

(ಆದಿಪುರಾಣಂ, ೧೧–೧೨೦.)

---

[1] ವಸಿರಿ (ಅ). [2] ಕೂ (ಅ). [3] ಡೆ ನಲ್ಲರಂ ಬಿರಿಯಿಗಳಂ ಮನಂಬಿರಿಯೆ (ಅ).
[4] ಥೇಷ್ಟದಿಂ (ಖ.ಬ). [5] ಬಿರಿದು (ಅ).

ಪಡೆದೊಡೆ ಕಂಪಂ ಬಣ್ಣಂ
ಬಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ ।
ಪಡೆಯವುಚಿದಲರ್ಗಳೆರಡುಮ
ನೊಡೆವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ ॥ ೧೨

(ಆದಿಪುರಾಣಂ, ೧೧–೧೧೮.)

ಪೊಂಬೆಸದಿಂದಮೆಯ್ದೆ ಸಮೆದಂದದೊಳೊಪ್ಪುವ ಬಣ್ಣಮುಂ ಕರಂ
ಪಂಬಲಿಸಲ್ಕೆ ತಕ್ಕವಚಱಾಗಿಸದೋಗರಗಂಪುಮಾವ ಪೂ ।
ವಿಂ [1]ಬಗೆಗೊಳ್ವುದಂತ[1]ವಱೊಳಗ್ಗಳಮಾದೊಡಮಕ್ಕಟಾ ಮರು
ಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡವೊ ನಿರ್ನಿಮಿತ್ತದಿಂ ॥ ೧೩

(ಕಾವ್ಯಾವಲೋಕನಂ, ೨೩–೧೩೮.)

ಗಟ್ಟನೆ ಕೊಳೆ ಕಡುಗಂಪಿನೊ
ಳಟ್ಟಮೆಗೊಳಗಪ್ಪೆವೆಂದು ಮಧುಪಂಗಳ್ ತಂ ।
ಮಟ್ಟಮೆ[2]ಯಭೀತಿಯಿಂದಮೆ[2]
ನೀಟ್ಟರಿಸಿದುವೆಂತೆ ಚಂಪಕಕ್ಕೆಱಗದುವೇ ॥ ೧೪

(ಆದಿಪುರಾಣಂ, ೧೧-೧೧೯.)

ಮೊಗೆದುಣ್ಬ್ರ ಮಧುವಂ ಮಲೀನವಪು ದಾನಂಗೊಂಬ ಮಾತಂಗಜಾ
ತಿಗಳೊಳ್ ಪೇಸದೆ ಮಾಡ್ಪ ಪುಷ್ಪಿತಲತಾಸಂಭೋಗಮಂ ನಿನ್ನೊಳಾ ।
ವಗುಣಂ ಷಟ್ಪದ ಪೋಗು ಮುಟ್ಟದೆನುತಂ ಕೈಸನ್ನೆಗೆಯ್ವಂತೆ ಸಂ
ಪಗೆ ಚೆಲ್ವಾಯ್ತು ಸಮೀರಸಂಚರಣಸಂಚತ್ಪಲ್ಲವೋಲ್ಲಾಸದಿಂ ॥ ೧೫

ಅರಲಂಬಿಂದೆಮ್ಮೊಳ್ ಮೆ
ಯ್ಗರೆದಿಸು ಬಿರಯಿಗಳನೆಂದು ಕೈಗೊಟ್ಟುವು ತಂ।
ಬರರಿಪುಗೆನ್ನದೆ ಮಾವಿನ
ತರುಗಳ್ ಕೈವಂದುವೆಂಬವರ್ ಮರುಳಲ್ತೇ ॥ ೧೬

(ಚಂದ್ರಪ್ರಭಪುರಾಣಂ, ೭–೪೩.)

ಅಳಿನಿನದ [3]ಗೀತ ಮದಕೋ
ಕಿಳನಿನದಂ ವಾದ್ಯಮಭಿನಯಂ[3] ನೆಗಟ್ವೆನೆಗಂ ।

---

[1] ಬಗೆವಾಗಳಿಂತಿ (ಅ). [2] ಯೆಚಾತಮಾಗಿರೆ (ಅ). [3] ದ ಮದಕೋಕಿಳ ಕಳನಿನದದ ಜತಿಯೊಳಭಿನಯಂ (ಅ).

ಲಳಿತಮನೇನಾಡಿಸಿದನೊ
ಮಳಯಾನಿಳನರ್ತಕಂ ಲತಾನರ್ತಕಿಯಂ ॥ ೧೭

(ಆದಿಪುರಾಣಂ, ೧೧-೯೩.)

ಏಣಿಯನಿಕ್ಕಿದೆಂ ನಿಮಿರ್ದ ಪೂಮರಗಳ್ಗೆ ವಿನೋದವಾಗಿ ನಿ
ಶ್ಶ್ರೇಣಿಯನುಣ್ಮಳಲ್ವುಳಿನ ಮಾಡಿಸಿದೆಂ ನೆಲೆಗೊಳ್ವ ನೀರ್ಗಳೊಳ್ ।
ಜಾಣಮರ್ವಂತು ಖೇಡಕುಟಿಯಂ ಪರಿಶೋಧಿಸಿದೆಂ ಸರೋವರ
ಕ್ಷೋಣಿಗಳೊಳ್ ಕುಳಿರ್ಕೊಳಿಸುವೋಲಗಶಾಲೆಯನೊಪ್ಪಿ ಮಾಡಿದೆಂ ॥ ೧೮

ತರುಣೀಪಾದಪ್ರಹಾರಕ್ಕಸುಕೆ ಕುರವಕಂ ವಾರನಾರೀಕುಚೋದ್ಯ
ತ್ಪರಿರಂಭಕ್ಕಂಗನಾದ್ಯಕ್ಪದವಿಗೆ ತಿಲಕಂ ಕಾಮಿನೀ ದುಗ್ಧಗಂಡೂ ।
ಷರಸಾಸ್ವಾದಕ್ಕೆ ಚಾಂಪೇಯಕಮೆಳಸಿ ಬರಲ್ವೇಡೆ ನಿಮ್ಮಂ ಪಿಕಾ[1]ನೀ
ಕ[1]ರವಂ ಮಂದಾನಿಲಂ ಬಿನ್ನವಿಸಿ ಕರೆದಪಂ ಸೌರಭಾ[2]ದರ್ಶ[2]ಹಸ್ತಂ ॥ ೧೯

(ಅನಂತನಾಥಪುರಾಣಂ, ೮-೯೧.)

ವಸುಧಾಮಂಡಳಮಂ ಮರುಳ್ಗೊಳಿಪ ರೂಪಾಶ್ಚರ್ಯದಿಂ ಮುತ್ತಿನೆ
ಕ್ಕಸರಂ ಮಲ್ಲಿಗೆ ಚಂದನಂ ಮೆಱೆ[3]ಯೆ[3] ಚೆಲ್ವಿಂ ಕಂಪು ಸೊಂಪಾದ ಮೆ ।
ಯ್ವೆಸದಿಂ ಮನ್ಮಥ ಚಂದ್ರ ಚೈತ್ರರೆ ವನಕ್ರೀಡಾರ್ಥಮೇೞ್ವಂತಿರೇ
[4]ೞ್ವ[4] ಸಭಾಮಂಡಲದಿಂ ತ್ರಿವಿಷ್ಟಪಸಭಾಮಾಣಿಕ್ಯದೀಪಾಂಕುರಂ ॥ ೨೦

(ಅನಂತನಾಥಪುರಾಣಂ, ೭-೯೨.)

ಹಯಮಂ [5]ರಾಜಕುಮಾರರ[5]ಶ್ವ[6]ರಥ[6]ಮಂ ವಿದ್ಯಾವತೀವೃಂದಮಾ
ನೆಯನುರ್ವೀಶತನೂಜರಂದಣಮನಾ ವಾರಾಂಗನಾಶ್ರೇಣಿ ರಾ ।
ಣಿಯವಾಸಂ ಶಿಬಿಕೌಘಮಂ ಪಿಡಿಯ ಪಿಂಡಂ ಪೆಂಡವಾಸಂ ನೃಪಾ
ನ್ವಯಚೂಡಾಮಣಿ ಪಟ್ಟಗಂಧಗಜಮಂ ಮುನ್ನೇಱೆ ತಾಮೇಱಿದರ್ ॥ ೨೧

(ಅನಂತನಾಥಪುರಾಣಂ, ೭-೯೩.)

ಅರಸಿ ಪೆಱಗೇಱೆ ಮದವ
ತ್ಕರಿಧವಳಮನೇಱಿ ಮೆಱೆದನವನಿಪಧವಳಂ ।
ಶರದಂಬುದಮಂ ರೋಹಿಣಿ
ವೆರಸೇಱಿದ ಚಂದ್ರನಂತೆ ಪೂರ್ವಾಸನದೊಳ್ ॥ * ೨೨

(ಅನಂತನಾಥಪುರಾಣಂ, ೭-೯೪.)

---

[1] ರಾವ (ಅ). [2] ಹರ್ಷ (ಖ.ಬ). [3] ವ (ಅ). [4] ದುರ್ (ಅ). [5] ನಾಗರ ಕಾದಿಯ (ಅ). [6] ಚಯ (ಕ.ಖ.ಬ). * ಈ ಪದ್ಯವಾದಮೇಲೆ (ಕ.) ಪ್ರತಿಯಲ್ಲಿ ಬರುವ ಮೂರು ಪದ್ಯಗಳು (ಖ.ಬ.) ಪ್ರತಿಗಳಲ್ಲಿ ೨೮-೨೯-೩೦ನೆಯ ಪದ್ಯಗಳಾಗಿವೆ. (ಖ.ಬ.) ಪ್ರತಿಗಳ ಕ್ರಮವೇ ಸರಿಯಾಗಿರುವುದರಿಂದ ಅದನ್ನೇ ಇಲ್ಲಿ ಅನುಸರಿಸಿದೆ.

ಬನಮಾಯ್ತಂಗಡಿಬೀದಿ ಪೀಲಿದಡೆಯೊಡ್ಡಿಂ [1]ಪಂಕಜಾಸ್ಯಂಗಳಿಂ[1]
ವನಜಾತಾಕರಮಾಯ್ತು ವಾರವನಿತಾಪಾಂಗಾಂಶುವಿಂ ಸೌಧಸಾ।
ರನಿಕಾಯಂ ಮಧುಮಾಸಮಾಯ್ತು ಪುರಮೆಲ್ಲಂ ಮಲ್ಲಿಕಾಮಾಲೆ ಭಾ
ರನಿಜಾಮೋದದಿನೆಂಬಿನಂ ತಳರ್ದನುರ್ವೀಮಂಡಲಾಖಂಡಳಂ॥ ೨೩

(ಅನಂತನಾಥಪುರಾಣಂ, ೬–೯೫.)

ಕುಮುದರಜಂಗಳೊಳ್ ಪೊರೆದು ವಾಃಕಣಜಾಳಮನಾಂತು ಕೂಡಿ ವಿ
ಶ್ರಮಿಸಿ ತರಂಗಮಾಳಿಕೆಗಳೊಳ್ ಕಳಹಂಸನಿಕಾಯದೊಳ್ ಭ್ರಮ।
ದ್ಭ್ರಮರ ರಜಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದ
ತ್ತಮರ್ದೊಸೆದಪ್ಪಿಕೊಂಡು ಕರೆವಂತೆವೊಲಾ ಮನುಜೇಂದ್ರಚಂದ್ರನಂ॥ ೨೪

(ಕಾದಂಬರಿ, ಪೂ.ಭಾ.; ೬೩೩.)

ಸಮದೇಭವ್ರಜದಾನವರ್ಷನಬಲಾಸಂದೋಹನೇತ್ರಾಬ್ಜಷಂ
ಡಮನೇಕಧ್ವಜಮೇಘಡಂಬರಚಯಂ ಶುದ್ಧಾಂತಕಾಂತಾಮುಖೇಂ।
ದುಮಯೂಖಂ ಚಮರೀಜವೀಜನಬಳಾಕಂ ತಳ್ತು ಕಾರುಂ ಬಸಂ
ತಮುಮುದ್ಯಾನವನಕ್ಕೆ ಬಪ್ಪ ತೆಱದಿಂ ಬಂದಂ ಮಹೀವಲ್ಲಭಂ॥ ೨೫

(ಅನಂತನಾಥಪುರಾಣಂ, ೬–೯೬.)

[2]ಮ[2]ಡದಿಂದೊತ್ತಿ ಮದಾಂಧಗಂಧಗಜಮಂ ಪಿಂತಿರ್ದ ನಲ್ಲಳ್ಗೆ ಕೈ
ಗುಡುತುಂ ಮೆಲ್ಲನಿಟೆಂಪಿ ಕಯ್ಯಲಗನತ್ತಲ್ ನೀಡಿ ಕುಂಭಾಗ್ರಮಂ।
ತೊಡೆಯುತ್ತುಂ ಪಿಡಿದಗ್ರಪಲ್ಲವಮನುದ್ದಂತಾಗ್ರಮಂ ಮೆಟ್ಟಿ ಕೈ
ಯೆಡೆಯಿಂ ಲಂಘಿಸಿದಂ [3]ನೆ[3]ಲಕ್ಕೆ ಜವದಿಂ ಸಾಹಿತ್ಯರತ್ನಾಕರಂ॥ ೨೬

(ಅನಂತನಾಥಪುರಾಣಂ, ೬–೯೭.)

ಸರಸಿರುಹಂಗಳಿಂದಿಟಿವ ಮತ್ತಮು[4]ದಾ[4]ಳಿಗಳಂತೆ ಕೇಳಿಭೂ
ಧರಶಿಖರಂಗಳಿಂದಿಟಿವ ಸೋಗೆಯ ಗೊಂದಣದಂತೆ ಬಂದ ಮಾ।
ಮರದೆಳಗೊಂಬಿನಿಂದಿಟಿವ ರಾಜಶುಕಾವಳಿಯಂತೆ ತೇರ್ಗಳಿಂ
ಕರಿಣಿಗಳಿಂದಮಂದಣದಿನೇಳಿಟಿತಂದರೊ ವಾರನಾರಿಯರ್॥ ೨೭

(ಅನಂತನಾಥಪುರಾಣಂ, ೭–೩.)

ಅಗೆವೊಯ್ದ ಚಂದ್ರಮಂಡಲ
ದಗೆಗಳವೋಲ್ ಕಾರಮುಗಿಲ [5]ಕೀಟ್ಸರಿ[5]ಗಳವೋಲ್।

---

[1] ಪ್ರಲ್ಲಿದೊಂಗಲ್ಗಳಿಂ (ಕ.ಖ.ಬ). [2] ತೊ (ಅ). [3] ಕೆ (ಅ). [4] ರಾ (ಅ)
[5] ಕೀಳ್ವರಿ (ಕ.ಬ).

ಸೊಗಯಿಸಿದುವು ಬೆಳ್ಗೊಡೆ ಕೊಂ
ಬುಗೊಂಬಿನೊಳ್ ಕಂಬಕಂಬದೊಳ್ [1]ಪೆಣ್ಬಿ[1]ಡಿಗಳ್॥ ೨೮

(ಯಶೋಧರಚರಿತ್ರೆ, ೪-೪; ಅನಂತನಾಥಪುರಾಣಂ, ೭-೬.)

ಎಳಲತೆಗಳ್ಗೆ ಸೋಗೆಗೆ ಸರೋಜಕುಲಕ್ಕೆ ಪಿಕಕ್ಕೆ ತಮ್ಮ ತೋ
ಳ್ಗಳ ಕುಡಿ ನೀಳ್ದ ಸೋರ್ಮುಡಿ ಮೊಗಂ ಗುಡಿ ಮೆಲ್ನುಡಿ ಮತ್ಸರಂಗಳಂ।
ಬಳೆಯಿಸಿ ಮುತ್ತುವಂತೆ ಬನಮಂ ನಡೆದರ್ ಕಳನಾದೆಯರ್ ಸಮು
ಜ್ವಳಮುಖಬಿಂಬೆಯರ್ ಕುಟಿಲಕುಂತಳೆಯರ್ ವಿಚಳಲ್ಲತಾಂಗಿಯರ್॥ ೨೯

(ಅನಂತನಾಥಪುರಾಣಂ, ೭-೭.)

ಪರಿತಂದುತ್ಸಾಹದಿಂದರ್ಚಿಸಿದರೊಸೆದು ವಾಸಂತಿಯಂ ಸಾಂದಿನಿಂ ಮಾ
ಮರನಂ ಶ್ರೀಖಂಡದಿಂ ಮಲ್ಲಿಗೆಯನಗುರುವಿಂ ಚಂಪಕಾನೀಕಮಂ ಕ।
ತ್ತುರಿಯಿಂ ಕಂ[2]ಕೆಲ್ಲಿಯಂ[2] ಕಂಪಿಡಿದ ಕ[3]ಮಳ[3]ದಿಂ ನಾಗಮಂ ನೆಲ್ಲಿಯಿಂ ಪಾ
ದರಿಯಂ ಕಾಶ್ಮೀರದಿಂ ಕೇಸರಮನಮಲಕರ್ಪೂರದಿಂ ಕಾಂತೆಯರ್ಕಳ್॥ ೩೦

(ಲೀಲಾವತಿ, ೧೩-೬೪.)

ಕುಸುಮಶರಾಸನಕ್ಕೆ ನನೆಯಂಬಿನ ತೆಕ್ಕೆಗೆ ಮೀನಕೇತನ
ಕ್ಕಸಮ ಶಿಳೀಮುಖಕ್ಕೆ ರತಿಗೇಳಿಗಿವೆಂದರೆ ನೋಡಿ ಮೆಚ್ಚಿ ಜಾ।
ನಿಸಿ ಕರಪಲ್ಲವಂ ಬಡುಗೆ ಬಾಯಿನ ಬಲ್ನನೆ ಮೊಗ್ಗೆ [4]ಜಾ[4]ಗರಲ್
ಪಸರಿಸೆ ಕೊಯ್ದು ಮಲ್ಲಿಗೆಯೊಳರ್ಚಿಸಿದರ್ ಸಹಕಾರಪಾದಮಂ॥ ೩೧

(ಅನಂತನಾಥಪುರಾಣಂ, ೭-೧೨.)

ಅರ್ಚಿಸಿದಾಯಲಾಗ ಪೊಸಪೂಗಳನೆಂದಿವೆ ಚಂದನಚ್ಛ[5]ಟಾ[5]
ಚರ್ಚೆಗಳೆಂಬವೋಲಡಸಿ ನೋಡಿ ನವಾಂ[6]ಕುರಕಾಂತಿದಾಮದಿಂ[6]।
ದರ್ಚಿಸುವಂತೆ ನೀಡಿ ನಳಿತೋಳನಲಂಪಿನೊಳಾಯ್ದು ಕೊಯ್ದು ಕೈ
ಮರ್ಚಲ ತೋರಮಲ್ಲಿಗೆಗಳಂ ತಳಿರ್ವಟ್ಟಲೊಳೊರ್ವಳೊಟ್ಟಿದಳ್॥ ೩೨

(ಲೀಲಾವತಿ, ೧೩-೬೬.)

ವದನದ ಕಂಪನೊರ್ಮೆ ಸೆಳೆಗೊಂಬಿನ ಪೂಗಳನೊರ್ಮೆ ಸೂಟಿಸೂ
ಟದೆ ಮುಸುಱುತ್ತಮಿರ್ಪ ಮಱಿದುಂಬಿಯನೀಯದೆ ಸುಯ್ಯೆ ನಾಸಿಕಾ।

---

[1] ಪೆರ್ವಿ (ಅ). [2] ಕೇಳಮಂ (ಅ). [3] ಳಭ (ಅ). [4] ಮೋ (ಕ.ಖ.ಬ). [5] ದಾ (ಕ.ಖ.ಬ). [6] ತರತಾಂತದಾಮದಿಂ (ಕ.ಖ.ಬ).

ವಿದಳಿತ ಚಂಪಕಶ್ವಸಿತ ಸೌರಭವೊರ್ವಳಪೂರ್ವರೂಪಿನಾ
ಗದ ನಗೆವೂಗಳಂ ಬಯಸಿ ಬೆಚ್ಚದೆ ಬಿಚ್ಚತವಾಯ್ದುಳಿತ್ತಿಯಿಂ॥ ೩೩

(ಲೀಲಾವತಿ, ೧೩-೬೭.)

ನಡೆ ತಣ್ಪೂತಮರಂಗಳಂ ನೆರೆಯೆ ಭಾಷಾಸಿಸ್ವನಂ ಪೊಣ್ಮೆ ಸಾ
ರ್ದಡಗ್ಗೈ ಬಾಗಿಸೆ ಶಾಖೆಯಂ ಬಲದ ಕೈ ಬೈತಿಟ್ಟವೋಲೆಯ್ದೆ ಕೆಂ।
ಪಡರ್ವನ್ನಂ ಕರಪಲ್ಲವಾಂಗುಲಿಗಳಿಂ ಪರ್ಮಾಂಬುವಂ ಮಿಂಚೆ ಪೂ
ದೊಡವಿಂಗೆಂದು ಬೆಡಂಗಿಯರ್ ಬಿಡದೆ ಪೂವಂ ಕೊಯ್ದರುದ್ಯಾನದೊಳ್॥* ೩೪

ನಿಮಿರ್ದಿರ್ದುದು ಮಧ್ಯಮುಂ ತಿವಳಿ ಕೆಟ್ಟವು ತೋಳ್ ಮೊಲೆ ಕುಂತಳಾಳಿ ಕ
ಣ್ಣಮೆ ಕುಡಿವುರ್ವು ಮೇಗೆ ನೆಗೆದೊಪ್ಪಿದುವೊಳ್ಮುಡಿ ಬಿಟ್ಟುವಿತ್ತ ಕಂ।
ಪಮನೊಳಕೊಂಡವೂರು ತುದಿಕಾಲ್ ನೆಲೆಗೊಂಡವು ನೂಪುರಂ ನಿನಾ
ದಮನೊಳಕೊಂಡವಿಂತಬಲೆ ಪೂದಿಱಿದಳ್ ನಿಮಿರ್ದಳ್ಕೆಗೊಂಬಿನೊಳ್॥* ೩೫

ವಳಿಗಳಟಿಯೆ ಬಿಂಕಂಬೆತ್ತ ವೃತ್ತಸ್ತನಂ ಕಂ
ಗೊಳಿಸೆ ಪೊಳೆಯೆ ಬಾಹಾಮೂಲಮೂರುದ್ವಯಂ ಸಂ।
ಚಳಿಸೆ ನಿಜಪದಾಂಗುಷ್ಠಾಗ್ರದಿಂ ನಿಂದು ಕಣ್ಗಳ್
ಪೊಳೆಯೆ [1]ಮಿಳಿರ್ವ[1] ಕೊಂಬಂ ನಿಳ್ಕಿ ಪೂಗೊಯ್ವಳೊರ್ವಳ್॥ ೩೬

(ಕಾವ್ಯಾವಲೋಕನಂ, ೬೧೧.)

ಪರಿಮಳಿತರಂಜಿತಂ ಬಂ
ಧುರಗಂಧಂ ಮಂದರಾಗವರ್ಧನಕರಮೀ।
ಮರುಗಂ ಕಬರ್ಪಾಳಮುಮಿರೆ
ಮರುಳಲ್ಲವೆ ಕುಸುಮನಿಚಯದೊಳ್ ಮೆಱೆವಳಿಗಳ್॥ ೩೭

ಬಂಬಲ್ಗುರುಳೊಡನಾಡಿಗೆ
ತುಂಬಿಗೆ ಪಗೆಯೆಂದು ಮುಳಿದು ಸಂಪಗೆಯೆಸಟಿಂ।
ತುಂಬಿಗುರುಳ್ಗೊಪ್ಪಿಸಿದಪ
ಳೆಂಬಿನಮೆಸಟ್ಗಳನೆ ತಿಱಿದು ಸೂಡಿದಳೊರ್ವಳ್॥ ೩೮

(ಅನಂತನಾಥಪುರಾಣಂ, ೭-೧೪.)

ಪರಭಾಗಂ ಪೊಣ್ಮೆವನ್ನಂ ತನುಲತೆ ಲತೆಯೊಳ್ ಕೂಡೆ ತುಂಗಸ್ತನಂ ಮಂ
ಜರಿಯೊಳ್ ಮುಂಡಾಡೆ ಕಣ್ಗಳ್ ಬೆರಸೆ ಕುಸುಮದೊಳ್ ಕುಂತಳಂ ತುಂಬಿಯೊಳ್ ತ।

---

* ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ. [1] ನಿರ್ಮಿದ (ಅ).

ಳ್ತರೆ ಪುಷ್ಪಾವಮೋದದೊಳ್ ಸುಯ್ ಕಲಸೆ ಕರತಳಚ್ಛಾಯೆ ತಳ್ಕೈಸೆ ಬಾಲಾಂ
ಕುರಮಂ ಪೂಗೊಯ್ದುಳೊರ್ವಳ್ ಲತೆಲತೆಗೊಲವಿಂ ಬಿರ್ದು[1]ವಂದಂತಿರಿರ್ದಳ್[1] ||

(ಲೀಲಾವತಿ, ೧೩-೭೦.)

ಸೋದು ಕರಾಬ್ಜದಿಂ ಮುಗಿದ ಕಣ್ಮಲರಂ ಕಚಭಾರಬಂಧಮಂ
ಸೋದಿಸಿ ಮೇಲುದಂ ಬಿದಿರ್ದು ಕುಂತಳಮಂ ಸಮುಸಂಶಯಕ್ಕೆ ತಂ|
ದೂದಿ ತಗುಳ್ದು ಬೆಂಬಳಿಯನೆಯ್ದಿಸಲಾಱದೆ ಕಾಯ್ವು ಮಲ್ಲಿಕಾ
ವೋದ ಮಧುವ್ರತಕ್ಕಗಿದು ವಿಭ್ರಮಮಂ ಪಡೆದತ್ತು ಸಂಭ್ರಮಂ|| ೪೦

ನಱುಸುಯ್ಗೆ ತುಂಬಿಗಳ್ ಬಂ
ದೆಱಗೆ ಕರಾಂಬುಜದೆ ಕಮಲಮುಖಿ ಸೋವುತ್ತುಂ|
ಮಿಱುಗುವ ನೀಲದ ಬಟ್ಟಿನ
ತಿಱಿಕಲ್ಗಳನಾಡುವಂತೆ ಸತಿ ಸೊಗಯಿಸಿದಳ್|| ೪೧

(ಕಾದಂಬರಿ, ಉ. ಭಾ. ೨೬.)

ನೀರೇಜವದನೆ ತಿಱಿದಳ್
ತೋರಿದ ಮಲ್ಲಿಗೆಯ ಮುಗುಳನಾಗಳೆ ಕಾಶ್ಮೀ |
ರಾರುಣಕರಪಲ್ಲವದಿಂ
ತಾರಗೆಯಂ ತಿಱಿವ ಪೂರ್ವಸಂಧ್ಯಾಂಗನೆವೋಲ್ || ೪೨

(ಲೀಲಾವತಿ, ೧೩-೭೭.)

ಪೂಗಣೆಯನ ಚಾಮರಮಂ
ಸೀಗುರಿಯಂ [2]ಪಿಡಿ[2]ವಳಂತೆ ಪೆಳೆಗೊಂಬುಗ[3]ಳಂ[3] |
ಬಾಗೊತ್ತಿ ಗುಜ್ಜುಮಾವಿನ
ಪೂಗೊಂಚಲನುಡಿದು ಪಿಡಿದಳಳಿವೆರಸೊರ್ವಳ್ || ೪೩

(ಲೀಲಾವತಿ, ೧೩-೮೨.)

ಎಳಲತೆಯನಂ[4]ಗ[4]ದಿಂ ಕೋ
ಕಿಳಮಂ ಕಳರವದಿ[5]ನಿಕ್ಕಿ[5] ಗೆಲೆಯಲರ್ವಳೆಯಂ |
ತ[6]ಳೆದಳೆ[6]ನೆ ನಿಳ್ಕಲಾಱದೆ
ಪೆಳೆಗೊಂಬಂ ಲಲನೆಯುಲುಗೆ ಸೂಸಿದವಲರ್ಗಳ್ || ೪೪

(ಲೀಲಾವತಿ, ೧೩-೮೬.)

---

[1] ದೆಂಬಂದದಿಂದಂ (ಕ.ಖ.ಬ). [2] ಪಡೆ (ಖ.ಬ). [3] ಳಿಂ (ಅ). [4] ದ (ಅ).
[5] ನಾಕೆ (ಅ). [6] ಳಿದುದೆ (ಅ).

ವಲ್ಲಭನ ತೋಳ ಸೋಂಕುಂ
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ ।
ನೊಲ್ಲೆಂ ಪೆಱತನೆನುತ್ತುಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ದುಳದೊರ್ವಳ್ ॥ ೪೫

(ಜಗನ್ನಾಥವಿಜಯಂ, ೧೪–೭೭.)

ಮರುಳೊಡನಾಡಿದ ಕತದಿಂ
ಮರುಳಾದನದಲ್ಲದಂತದಂ ಸೂಡನೆ ಶಂ ।
ಕರನೆಂದು ಕೊಯ್ದುಳೊರ್ವಳ್
ಪರಿಮಳಮಂ ಬೀಱುತಿರ್ಪ ಪೊಂಗೇದಗೆಯಂ ॥ ೪೬

(ಜಗನ್ನಾಥವಿವಿಜಯಂ, ೧೪–೮೪.)

ಅಳಿ ಕದುಕಿದ ಕಡೆಗಂಗಳ
ಗಿಳಿ ಕದುಕಿದ ದಶನವಸನದುನ್ಮದದ ಪಿಕಾ ।
ವಳಿ ಕದುಕಿದ ಬೆರಲ ಲತಾ
ಲಲಿತೆಯರೆ ಪಲಂಬರಾದರಲಗೊಯ್ವೆಡೆಯೊಳ್ ॥ ೪೭

ಸುರಹೊನ್ನೆಯ ಮುಗುಳಂ ಕೊ
ಯ್ದರವಿಂದದ ನೂಲೊಳೊಪ್ಪೆ ಕಟ್ಟಿದಳೊರ್ವಳ್ ।
ಪರಿಮಳಮುಳ್ಳೆಳಮುತ್ತಿನ
ಸರಮೆತ್ತಣದೆಂದು ಮುಗ್ಧೆಯರ್ ಮುತ್ತುವಿನಂ ॥ ೪೮

(ಅನಂತನಾಥಪುರಾಣಂ, ೭–೨೦.)

ಕಟಿಸೂತ್ರಂ ಬ್ರಹ್ಮಸೂತ್ರಂ ಸರಿಗೆ ಮಿನುಕು ಕೊಪ್ಪುಂಗುರಂ ಕರ್ಣಪೂರಂ
ಕಟಕಂ ಮಂಜೀರಕಂ ಮೂಕುತಿ ಚಳಕಿಗೆಪೂ ಪೊಂದಳಿರ್ ಪಾಯವಟ್ಟಂ ।
ನಿಟಿಲಾಂ[1]ತಂ[1] ಲಂಬಳಂ ಪೂಬಳೆ ಬಳೆ ಪೆಱೆ ಕೇಯೂರಮೆಂಬನ್ನವಂ ಪ್ರ
ಸ್ಫುಟರ[2][ತ್ನೋ]²ಪಾತ್ರಯಂ ರಂಜಿಸುವಿನಮಲರಿಂ ಕಾಂತೆಯರ್ ಮಾಡಿ
[ತೊಟ್ಟರ್ ॥

ಬಳೆ ಮುದ್ರೆ ಬಂದಿ ಪುಟ್ಟಿಗೆ
ಬಳಸದ ಬಿಚ್ಚೋಲೆ ಹರಿಹು ಹೆಱೆ ತಿಲಕಂ ಕಂ ।
ಗಳನಲಸದೆ ಕೇದಗೆವೂ
ಗಳೊಳೆತ್ತಂ ಮಾಡಿ ತೊಟ್ಟರಬಲೆಯರೆಲ್ಲಂ ॥ ೫೦

[1] ಕಂ (ಕ). [2] ನ್ನೋ (ಕ.ಖ.ಬ).

ಪೊಸತಿಕ್ಕುವಂತೆ ಕಾಮನ
ಪೊಸನಿಧಿಯಂ ಕಾಮುಕಾಳಸರ್ಪಂಗೊಲವಿಂ ।
ಪೊಸಮಲ್ಲಿಗೆಯುಮನಡಕೆಯ
ಸಸಿಯುಮನೊಸೆದೊರ್ವಳಿಕ್ಕಿದಳ್ ಸೋರ್ಮುಡಿಯೊಳ್ ॥ ೫೧

(ಲೀಲಾವತಿ, ೧೩-೧೦೮.)

ತೊಡವೆನಿತೊಳವನಿತಕ್ಕಂ
ಪಡಿಚಂದಂ ಮಾಡಿ ಕಾಂತೆಯರ್ ಪೂದೊಡವಂ ।
ತೊಡೆ ತೊಟ್ಟು ಮರಲಸರಳಂ
ಮಡಲಿಱಿದು ಮನೋಜನಡಸಿ ವಿರಹಿಯನೆಚ್ಚಂ ॥ ೫೨

ವನಕೇಳೀಲೀಲೆ[1]ಯೊಳ್[1] ತನ್ನಿನಿಯನ ದಯೆಯಿಂ ಪೆತ್ತ ನೂತ್ನೋತ್ಪಲಾಂಭೋ
ಜನವೋತ್ತಂಸಾವತಂಸಂಗಳನಭಿನವಪುನ್ನಾಗಕೇಯೂರಮಂ ನೂ
ತನ ಚಂಚತ್ಕರ್ಣಿಕಾರಪ್ರಸವವಲಯಮಂ ಮಲ್ಲಿಕಾಕಟ್ಟುಲವ್ಯ
ಕ್ತನವೋದ್ಯದ್ಧಾರಮಂ ಕಾಮಿನಿ ತಳೆದೆನಸುಂ ನೋಡೆ ಕಣ್ಗಿದ್ದವಾದಳ್ ॥ ೫೩

(ಶೃಂಗಾರರತ್ನಾಕರಂ, ೧-೩೭.)

ಎಳಲತೆಯುಯ್ಯಲಾಡಿದಪುದೆನ್ನಸಿತೋತ್ಪಲಮುಯ್ಯಲಾಡಿತೆ
ನ್ನೆಳದಳಿರುಯ್ಯಲಾಡಿದುದು ತೆಂಬೆರಲೆಂಬೆಲರಿಂದಮೆನ್ನುತಂ ।
ಕೆಳದಿಯರೊಲ್ದು ಪಾಡೆ ತನುಮಧ್ಯೆ ವಿಲೋಲ[2]ವಿನೀಲ[2]ನೇತ್ರೆ ಕೆಂ
ದಳದ ಬೆಡಂಗನಿಕ್ಕಿ ತಳಿರುಯ್ಯಲನಾಡಿದಳಾಮ್ರಶಾಖೆಯೊಳ್ ॥ ೫೪

(ಅನಂತನಾಥಪುರಾಣಂ, ೭-೧೫.)

ತಳಿರುಯ್ಯಲ್ ಕಣ್ಗೆವಂದತ್ತೆಳಅಡಕೆಯ ಕಂಭಗಳಿಂ ಕಂಜಸೂತ್ರೋ
ಜ್ವಳ[3]ರಜ್ಜು[3]ಭ್ರಾಜಿತಂ ಚಂದನದ ಮಣೆಯಿನುನ್ಮತ್ತಭೃಂಗಾಂಗನಾಮಂ ।
ಗಳಗೀತೋನ್ಮಾ[4]ದಿ[4] ಮೇಗೇಱಿಸಿದ ಕೃತಕನೃತ್ಯನ್ಮಯೂರಂಗಳಿಂ ನಿ
ರ್ಮಳಮಾಳಾಚಾಮರಂ ಚಂಪಕಮುಕುಳಚಲದ್ಘಂಟಿಕಾಜಾಳದಿಂದಂ ॥ ೫೫

(ಲೀಲಾವತಿ, ೧೧-೫೭)

ಎಳಸಿರೆ ದೇಸಿ ಪೊಚ್ಚಪೊಸಮಲ್ಲಿಗೆಯಂ ಪಲವಂ ತುಱುಂಬಿ ಕ
ಣ್ಗೊಳಿಸೆ ಸಿರಿಕಂಡದಣ್ಪನೊಸೆದಿ[5]ಟ್ಟು[5] ದುಕೂಲಮನುಟ್ಟು ಮೌಕ್ತಿಕಾ ।

---

[1] ಯಿಂ (ಕ.ಖ.ಬ). [2] ವಿಲೋಲ (ಕ.ಖ.ಬ). [3] ರಾಜಿ (ಕ.ಖ.ಬ). [4] ದ (ಖ.ಬ). [5] ಕ್ಕಿ (ಅ).

ವಳಿಯನೊಱಲ್ದು ತೊಟ್ಟು ತಳಿರುಯ್ಯಲನ[1]ಟ್ಕಱೊ[1]ಳೇಱಿ ಪಾಡಿದಳ್
ಲಲನೆ ವಸಂತದೊಳ್ ಪಲವು ವರ್ಣ[2]ನ[2]ದಿಂ ಕವಿಕಾಮದೇವನಂ ॥ ೫೬

(ಶೃಂಗಾರರತ್ನಾಕರಂ, ೧-೪೦.)

ತೆರೆಮುಗಿಲನಡರ್ವ ವಿದ್ಯಾ
ಧರಿಯೆಂಬಿನಮೊರ್ವಳೇ[3]ಱಿ[3] ಕೃತಕಾದ್ರಿಯನೇಂ ।
ದೊರೆಯಾದಳೊ ರತಿಕಾಂತನ
ಕರುಮಾಡದ ಮದನಮೋಹಿನೀಪುತ್ರಿಕೆವೋಲ್ ॥ ೫೭

(ಅನಂತನಾಥಪುರಾಣಂ, ೭-೧೬ ; ಯಶೋಧರಚರಿತೆ, ೪-೯.)

ನಿಱಿದಳಿದೊರ್ಂಗಲಂ ತೆಗೆದು [4]ಬಾರುಳಿ[4]ಯಂ ದನಿಗೆಯ್ದಶೋಕೆಯೊಳ್
ಕಿಱುಮುಗು[5]ಳ್ಗಂಜಿ[5]ಯಂ ತಳೆದು ಪೂವಿನ ಬಲ್ಮೊನೆಯಂಬು ಕೈಯೊಳ ।
ಚ್ಚಿಱಿದಿರೆ ಮೇಚಕಚ್ಛವಿಯ ತಾವರೆಗಂಗಳ ಗಾಣವೆಂಗಳೇಂ
ಮೆಱೆದರೊ ಕೇಳಿಶೈಲಶಿಖರಾವಳಿಯೊಳ್ ಶಬರೀವಿಲಾಸಮಂ ॥ ೫೮

(ಅನಂತನಾಥಪುರಾಣಂ, ೭-೧೭.)

ಸೊಗಯಿಪ ಬಳ್ಳಿಮಾವನಡರ್ದೇಱಿ ತಳಿರ್ಪೂದಿದಿರ್ದ ಕೊಂಬುಕೊಂ
ಬುಗಳೊಳಡಂಗಿ ತುಂಬಿಯುವೊಲಾಣತಿಮಾಡಿ ಶುಕಾಳಿವೋಲ್ ಕೊದಳ್ ।
ಬಗೆವುಗೆ ಮಾತನಾಡಿ ಪಿಕದಂತೆ ಪುಗಿಲ್ ಪುಗಿಲೆಂದು ಭೂಪನಂ
ನಗಿಸಿದರಲ್ಲಿ ಜವ್ವನದ ಸೊಕ್ಕಿನಳುರ್ಕೆಯ ನೀಱೆಯರ್ ಕೆಲರ್ ॥ ೫೯

ನಿಱಿ ಸೊಪ್ಪಾದುದು ಕೋಡಗಂ ಸೆಳೆದುದೇ ಮೈ ಬಾಸುಟೇಟ್ಟುನ್ನೆಗಂ
ಪಱಿದತ್ತಕ್ಕಟ ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್ ।
ತುಱುಗಲ್ಗೊಂಡವು ತಂಗೆ ಬಲ್ಲಿತೆ ಬಿಸಿಲ್ ಪೂದೋಂಟದೊಳ್ ನಿನ್ನನೆಂ
ದಱಿದುತ್ಸಾಹಿಯುಳಂಕೆಗೆಯ್ದು ಸಖಿಯಂ ತನ್ವಂಗಿ ಕ[6]ಣ್ಬೇ[6]ಱಿದಳ್ ॥ ೬೦

ಎಳಮಾವಿನ ತಳಿರ್ಪೂವಿನ
ಗಿಳಿ ಚಿಲಿಪಿಲಿಯೆಂದೊಡಾ ಮರಂ ಜಗಳಕ್ಕ ।
ವ್ವಳಿಸಿದಪುದೆಂದು ಭಯದಿಂ [illegible]
ತಳಿಗೊರ್ಯ್ಯ[7]ದೆ[7] ಪಿಂಗಿ ಮುಗ್ಧೆ ನಗಿಸಿದಳೊರ್ವಳ್ ॥ ೬೧

ಗಿಳಿ ಸೆಳೆಯೆ ತಳಿರನೆಲೆವಱೆ
ಗಳ ಕಾಯ್ಗಳ್ ಪೊಳೆಯೆ ಚೂತಲತೆ ಪೋಲ್ತತ್ತಂ ।

---

[1] ಟ್ಟಿಯೊ (ಅ). [2] ಕ (ಅ). [3] ಱೆ (ಕ). [4] ಚಾರಿಣಿ (ಕ.ಖ.ಬ).
[5] ಳಂಜಿ (ಕ.ಖ.ಬ). [6] ಣ್ಬೋ (ಖ.ಬ). [7] ಲೆ (ಖ.ಬ).

ಚಳಮನಳಿಪಿಂದಲಿನಿಯಂ
ಸೆಳೆಯೆ ಕುಚಂ ಪೊಳೆಯೆ ಮುರಿದು ನಿಂದಂಗನೆಯಂ ॥ ೬೨

ಕುರವಕಮಂ ಘನಸ್ತನದ ಸೋಂಕಿನೊಳುಳ್ಳಲರ್ವಂತಿರಾಳಿಯಂ
ಕರುವಿಡೆ ಕೂಡೆ ಕಂಡು ದರಹಾಸದಿನಾಕೆಯ ಚಿತ್ತವಲ್ಲಭಂ ।
ಪುರುಡಿಸಿ ಕಯ್ಯೊಳಿರ್ದ ಸರಸೀಜಮನಂಟುಮುಗುಳ್ಚಿ ಬೆರ್ಚಿ [1]ತಾ
ವರೆಯೆಸಪ್ಪೊಟ್ಟ[1]ನಿಟ್ಟಸುಕೆಯೊ[2]ಳ್ಮಿಳಿರಲ್[2] ಪಡೆದಳ್ ಪ್ರಸಾದಮಂ ॥ ೬೩
(ಅನಂತನಾಥಪುರಾಣಂ, ೭-೧೯.)

ತರಳಾಪಾಂಗದಿನಾ ನೃಪಾಲತಿಲಕಂ [3]ಮ್ಯೆವೆತ್ತರಲ್ದುಂ ಪ[3]ಯೋ
ಧರಸಂಘಟ್ಟದೆ ಕಾಮು[4]ಕಾಕು[4]ರವಕಂ ಸೊಂಪೇಱೆ ವಾಮೇತರೇ ।
ತರಪಾದಾಹತಿಯಿಂದಶೋಕನೊಲವಿಂದಂ ತಳ್ತು ಸಂತಂ ನಿರಂ
ತರಮುದ್ಯಾನವಿನೋದಮಂ ಸಲಿಸುವಂ ಭೂಕಾಂತನಾ ಕಾಂತೆ[5]ಯೊಳ್[5] ॥ ೬೪
(ಅನಂತನಾಥಪುರಾಣಂ, ೨-೧೮.)

ದಳಿತಾಂಭೋಜಾತವಕ್ತ್ರಶ್ವಸಿತಪರಿಮಳಂ [6]ಭ್ರೂಲತಾ[6]ಕ್ಷೇಪಲೀಲಾ
ವಳಿತಾಪಾಂಗಾನುರಾಗಂ ಮಧುರಫಳರಸಾಸ್ವಾದ್ಯಹೃದ್ಯಾಧರಂ ಕೋ ।
ಮಳೆಯೊಳ್ ಸಂಭೋಗದೊಳ್ ಸಂಧಿಸೆ ನೃಪನ ಮನೋಜಾತಕೀರಂ ವಚಃಕೋ
ಕಿಳಮಾಲೋಕದ್ವಿರೇಫಂ ತಣಿವುವೆಳಸಿ ತತ್ಪ್ರೇಮಕಾಂತಂ [7]ನಿತಾಂತಂ[7] (?) ॥ ೬೫
(ಅನಂತನಾಥಪುರಾಣಂ, ೨-೧೭.)

ಗಳದೊಳ್ ತೋಳವೊದಲ್ ಪಳಂಚೆ ಕಟಿಯೊಳ್ ವೃತ್ತೋರು ತಳ್ಪೆಯ್ಯೆ ಪೆ
ರ್ಮೊಲೆ ವಕ್ಷಃಸ್ಥಲಮಂ ಪ[8]ಳಂಚಲೆಯೆ ತೂಱ[8]ಲ್ಗೊಂಬಿನೊಳ್ ತೋರ್ಪ ಗೊಂ ।
ಚಲ ಪೂವಿಂಗೆ ಲತಾಂಗಿ ನಿಳ್ಕುವಿನಮೋಪಂ ಲೀಲೆಯಿಂದೆತ್ತಿ ವೃ
ಕ್ಷಲತಾಲಿಂಗನಭಂಗಿಭಾವರಸಮುಗ್ನಸ್ತಂಭಮಂ ತಾಳ್ದಿದಂ ॥ ೬೬
(ಅನಂತನಾಥಪುರಾಣಂ, ೭-೧೮.)

ಸ್ತನಮುರ[9]ದೊಳು[9]ರ್ಚಿತೆನೆ ಮಿಗೆ
[10]ಮೊನಸಿದ[10] ಮೈನವಿರೆ ನಾಂಟಿತೆನೆ ಕೊಂಬಿನ ಪೂ ।

---

[1] ಕಾತರೆತಳಿರ್ಪೊಟ್ಟ (ಅ). [2] ಳ್ದಳಿರಂ (ಅ). [3] ಮುಯ್ಯಾಂತರಲ್ದುತ್ಪ (ಅ).
[4] ಕೋತ್ಕು (ಅ). [5] ಯಂ (ಅ). [6] ಕೋರಕಾ (ಕ.ಖ.ಬ). [7] ವಸಂತಂ (ಅ).
[8] ಳುಂಕೆ ತಿಱಿಯಲ್ ವೇ (ಅ). [9] ಮನು (ಕ.ಖ.ಬ). [10] ಮನಸಿಜ (ಅ).

ವನೆ ತೋಱು ತಿಱಿಯಲೆ[1]ತ್ತಿ ದ[1]
ತನು [2]ಬಿಗಿವಿನಮಪ್ಪಿ ವಲ್ಲಭಂ[2] ನವವಧುವಂ ॥ ೬೭
(ಲೀಲಾವತಿ, ೧೩–೯೬.)

ಅನುವಿಸಿ ನನೆದಿಱಿದಪೆನೆಂ
ದಿನಿಯಂ [3][ಬರೆ ಕಂಡು][3] ತೋಳನೆತ್ತದೆ ಕುಚಕುಂ ।
ಭನ[4]ಖಾಂಕ[4]ದತ್ತ ಲಜ್ಜಾ
ವನತಾನನೆ ನಿಂದ ಭಾವಮಂ ಬಯಸದರಾರ್ ॥ ೬೮
(ಲೀಲಾವತಿ, ೧೩–೯೮.)

ಎಡಗಯ್ಯೊ[5]ಳೊ[5]ಯ್ಯು ಮೋಲುದು
ಸಡಿಲ್ದು ಬರೆ [6]ಬದಿಗೆ ಬಳೆದು[6] ನವನಖಪದಮಂ ।
ಬಿಡುಮುಡಿ ಮುಸುಂಕೆ ಮುಱಿದೇ
ನುಡಿದಳೊ ಕುಡಿದಳಿರನಲಘುಕುಚೆ ಪತಿಯಿದಿರೊಳ್ ॥ ೬೯
(ಲೀಲಾವತಿ, ೧೩–೯೯.)

ಒಂದು ಕುಚಮುರ[7]ಮನು[7]ರ್ಚಿರೆ
ಚಂದನಧವಳಿತನನಪ್ಪಿ ಪೂಗೊಯ್ದಳ್ ತ ।
ಳ್ತಿಂದುಧರನಂಗದಿಂ ಮುಳಿ
ಸಿಂದಂ ಮಿಗೆ ಮುರಿದು ಮಗುಟ್ದ ಗಿರಿಜೆವೊಲೊರ್ವಳ್ ॥ ೭೦
(ಲೀಲಾವತಿ, ೧೩–೧೦೨.)

ಕರಮೆಸೆದವು ಲತೆಗಳನೆ
ಟ್ತರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್ ।
ಸಿರಿಖಂಡದ ವಳಯಂ ಕ
ಪ್ಪುರವಳುಕಿನ ಜಗಲಿ ಕೇತಕೀರಜದ ಮಟಲ್ ॥ ೭೧

ಬಿಸಿಲೆಯ್ದ ಪಸಲೆಗವಿದುದು
ಪಸುರ್ವೆಳ[8]ಗಿಂದೆ[8]ನಿಪ ಬಾಳಕದಳೀವನ[9]ದೊಳ್[9] ।
ಬಿಸರುಹದಳಂಗಳಿಂದಂ
ಮಿಸುಕದ ಹಿಮಗೃಹಮನವನಿಪಾಲಂ ಕಂಡಂ ॥ ೭೨
(ಕಾದಂಬರಿ, ಉ. ಭಾ ; ೨೦೯.)

---

[1] ತ್ತನೆ (ಅ). [2] ಬಿಗಿವಿನಮಪ್ಪಿಯಭಿಮತಂ (ಅ). [3] ತರೆಬಂದು (ಅ.ಕ), ಕರೆ ಬಂದು (ಖ.ಬ). [4] ಲೋಕ (ಖ.ಬ). [5] ಳಾ (ಕ.ಖ.ಬ). [6] ಬರಿಗೆ ಬಳೆದು (ಅ). ಬದಿಗಬಳೆ (ಖ.ಬ). [7] ದೊಳು (ಅ). [8] ಗೇಱು (ಕ.ಖ.ಬ). [9] ಮಂ (ಕ.ಖ.ಬ.).

ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂಧುವಾ
ರದ ಚಮರೀಜದಿಂ ಕುಮುದದುಜ್ವಲಮಾಲಿಕೆ[1]ಯಿಂದೆ [1]ಪುಂಡರೀ ।
ಕದ ಕಿಱುಗಂಟೆಯಿಂದೆ ಸಹಕಾರದ ಕೆಂದಳಿರಿಂದೆ ಚೆಲ್ವುವೆ
ತ್ತುದು ಕದಳೀದ್ರುಮಂ ಗ್ರಥಿತಸೌಂದರಮಂಡನಕಾಳಿಕವ್ರಜಂ ॥ ೭೩

(ಕಾದಂಬರಿ, ಉ. ಭಾ; ೨೧೩.)

ನಗಿಸುವ ಕೋಡಗಂ ನೆರೆದು ನೋಡುವ ದೀಹದ ಹುಲ್ಲೆ ಸೋಗೆಯಂ
ನೆಗಪಿ ತುಡುಂಕಿ ಮೆಟ್ಟುವ ನವಿಲ್ ಕಳಕೂಜನೆಗೆಯ್ವ ಪಾರಿವಂ ।
ನಗುವ ಶುಕಾಳಿಯಾಡುವ ಕುರಂಗವಡಂಗುಱುಚಾಟಮುಂ ಪ್ರಿಯ
ಗೆರ್ಗೆಯಿಪವಂಗಜನ್ಮನ ಬೆಸಂಬಡೆದಂತೆ ಲತಾಗೃಹಂಗಳೊಳ್ ॥ ೭೪

ಎಲೆ ಜಲಜಾಸ್ಯೆ ನಿನ್ನ ನಯನೋತ್ಪಲಮಂ ಮಱಿದುಂಬಿ ಪತ್ತುವಿ
ತ್ತಲೆ ಕವಿತಪ್ಪುವೆಂದವಳ ಕಣ್ಗೆ ನಿಮೀಲನಮಂ ನಿಮಿರ್ಚಿ ಕಾ ।
ದಲಳಧರಾಗ್ರಮಂ ಸವಿದು ಪೀಡಿಸಿತೀಕೆಯ ವಕ್ತ್ರಪದ್ಮಮಂ
ನಲಿದಳಿಯೆಂದು ತಾಂ ಪುಸಿದನಾಕೆಗೆ ನಲ್ಲಳ ಸೀತ್ಕೃತಂಗಳಂ ॥ ೭೫

(ಲೀಲಾವತಿ, ೧೩-೧೦೩.)

ಮೊಗವಿಾಸೆ ಬಾರದೋಪರ್
ಸೊಗಯಿಸಿ ಪೆಣ್ಬರಿಜನಿಟ್ಟು ಬರೆ ಪೂದಿಱುವ ।
ಬ್ಬಿಗದಿಂದಮೆಯ್ದೆ ಮೆಚ್ಚಿನ
ಬಗೆಯಿಂ ಸ್ಮರಕೇಳಿಗೆಳಸಿದರ್ ಪುಂಶ್ಚಲಿಯರ್ ॥ ೭೬

(ಲೀಲಾವತಿ, ೧೩-೧೦೭.)

ಪೊಯ್ದುದು ಮಾಯ್ದುಲರ್ ತಿಱಿಯಲೀಯದೆ ಧೂಳಿಯನೆಂದು ಗಾಳಿಯಂ
ಬಯ್ದು ಪರಾಗಮಂ ತೊಡೆಯುತಂ ನಿಡುಗಂಗಳನೊತ್ತಿ ಮುಚ್ಚಿ ಕೊಂ ।
ಡೊಯ್ದತಿಮುಗ್ಧವಲ್ಲಭೆಯ ಕಣ್ಬೊಣರಂ ಪತಿ ತುಂಬಿ ಪೀರ್ವಪೊಲ್
ನೆಯ್ದಿಲನೂದಿಯೂದಿ ಪರಿಚುಂಬಿಸಿದಂ ನಗುತಂ ನಿಜೇಚ್ಛೆಯಿಂ ॥ ೭೭

(ಲೀಲಾವತಿ, ೧೩-೧೦೪.)

ಅಲರಾ[2]ಯ್ವಬಲೆಯ[2] ನೊಸಲೊಳ್
ಜಲಜಲಿಸುವ ಬೆಮರನೊರಸಿ ಕಳೆವಿನಿಯನ ಮೆ ।
ಲ್ಪ[3]ಲೆವ ತಳೆದಲೆ[3]ಪದಿಂ ತಂ
ಬೆಲರಲೆಪದೆ ಮುಗುಳ್ತ ಲತೆವೊಲೆಯ್ದೆ ಬೆಮರ್ತಳ್ ॥ ೭೮

(ಲೀಲಾವತಿ, ೧೩-೧೦೫.)

---

[1] ಗೊಂಡೆ (ಕ.ಖ.ಬ). [2] ಯ್ದು ಬಬಲೆ (ಅ). [3] ಲೆ ತವಳಲೇ (ಖ.ಬ).

ಗಿಳಿಗಳೊಡಗಟಪಿ ಮೊರೆವಳಿ
ಕುಳದೊಡಗಾಣಯ್ದೆ ಪುರುಳಿಯೊಳಗೆಳಸಿ ನವಿ ।
ಲ್ಗಳ ಬಳಗದೊಳಗೆ ನರ್ತಿಸಿ
ವಿಳಾಸಿನೀನಿಕರಮಾಗಳೇಂ ದಳ್ಕಿಸಿತೋ ॥ ೭೯

ಕರಗಮನೆತ್ತು [1]ನೀರ[1]ಳಿಕೆ ಕಾಲ್ದೊಳೆ ಮಾಳಿನಿ ತೀರ್ಚುೞ ಬೋನಮಂ
[2]ಸ[2]ರಳಿಕೆ ಪಾಸು ಗ[3]ದ್ದು[3]ಗೆಯನುತ್ಪಳಿನೀ ಕೆಲಕೊತ್ತು ಚಿತ್ರಿಕೇ ।
ಪರಿಯಣಮಂ ನೃಪೇಶ್ವರಿಯನಾರೊಗಿಸಲ್ ಕರೆ ಮಂಜುಘೋಷೆಯೆಂ
ದರಸಿಗೆ ಬೋನಮೆತ್ತಲುಲಿದ[4]ತ್ತು ವನಾಂತದೊಳಂಗನಾಜನಂ[4] ॥ ೮೦
(ಅನಂತನಾಥಪುರಾಣಂ, ೪-೮೫.)

ಕರಿರಿಪು ಪೀಠಮಂ ತೊಡೆದು ಪಾಸುವ ಕತ್ತುರಿನೀರಧಾರೆಯಿಂ
ಪರಪುವ ಮುತ್ತಿನೆಕ್ಕಸರಮಂ ಕಡೆಯಿಕ್ಕುವ ಪಾರಿಜಾತದೊ ।
ಳ್ಪರಲನುದಿರ್ಚುವರ್ತರದ ಗದ್ದುಗೆಯಿಕ್ಕುವ ಸಂಭ್ರಮಂಗಳಿಂ
ಪರಿಮುರಿಯಾಡಿದರ್ [5]ನವಲತಾಗೃಹಪಂಕ್ತಿಯೊಳಂಗನಾಜನಂ[5] ॥ ೮೧
(ಅನಂತನಾಥಪುರಾಣಂ, ೪-೮೬.)

[6]ದೇವಿ[6] ನಿಜವದ[7]ನವಿಧುಗೀ
ತಾ[7]ವರೆ ಸೋಲ್ತತ್ತು ಬಾಯ ತಂಬುಲಮಂ ನೀ ।
ನೀವುದೆನಿಪಂತೆ ಪಚ್ಚೆಯ
ಕಾವಿನ ಮಾಣಿಕದ ಡವಕೆ[8]ವಿಡಿದಳದೊ[8]ರ್ವಳ್ ॥ ೮೨
(ಅನಂತನಾಥಪುರಾಣಂ, ೪-೮೪.)

ತುಟಿಕಲಡುಗೆಗಳೊಳೇಂ ಪಟು
ಗಟವೆಯ ಕೂಳ್ ತಿವುಡುಗಳೆದ ತೊವರಿಯ ತೊವೆ ಕಾ ।
ಯ್ದಿಟಿಪಿದ ತುಪ್ಪಂ ಕೋಡುವ
ಕಟಿಲಲ್ಲದೆ ದಿವ್ಯಭೋಜನಂ ಪೆಱತುಂಟೇ ॥ ೮೩
(ಕಾವ್ಯಾವಲೋಕನಂ, ೨೪೧.)

ಸಿತಮಿಶ್ರಿತ ಘೃತಪೂರಂ
ಸಿತಮಿಶ್ರಿತ ಸುರಭಿಗಂಧಕದಳಂ ಸದಳಂ ।

---

[1] ಶೀತ (ಅ). [2] ತ (ಅ). [3] ದ್ದಿ (ಅ). [4] ತ್ತಮರೇಂದ್ರಮಹತ್ತರೀಜನಂ (ಅ). [5] ಸುದತಿಯೋಲಗ ಸಾಲೆಯೊಳಿಂದ್ರಕಾಂತೆಯರ್ (ಅ). [6] ತೀವೆ (ಕ.ಖ.ಬ) [7] ನ ನಡುಗಿತ್ತಾ (ಖ.ಬ). [8] ನೀಡಿದಳೊ (ಖ.ಬ).

ಸಿತದುಗ್ಧಪೂರಮೆಸೆದಿರೆ
ಸಿತನಿಷ್ಪಿಂಡಮನಭಂಡಮಮಂ ಮುಟ್ಟುವುದೇ ‖ ೮೪

ಬಗಿದಗುಪೊಂದದಂತೆ ತೆಗೆದಾಱಿಸಿದೋಗರದೊಳ್ ಪೊದಟ್ಟು ಕ
ಮ್ಮಗೆ ಕೆನೆಗೊಂಡ ಗಡ್ಡಮೊಸರಂ ಸುರಿದೇಲೆಯಚೂರ್ಣವಿಕ್ಕಿ ಕಾ ।
ಯ್ದೊಗುಮಿಗೆ ಬೇಳೆಗೆಯ್ದು ಮೆಣಸಂ ತಳಿದಲ್ಲದ ಚಲ್ಲಿಯಂ ಪವ
ಣ್ಬಿಗೆ ಕಲಸಿರ್ದ ತಣ್ಗಲಸುಗೂಟನಿಳಾಪತಿಗಿತ್ತನಟ್ಟಿಯಿಂ ‖ ೮೫
(ಲೀಲಾವತಿ, ೫–೭೦.)

ಪಿಪ್ಪಿಲಿ ಚಿಲ್ಲಕಾಯ್ ಮೆಣಸು ಮಾಗುಳಿವೇರ್ ಪೊಳೆಯಲ್ಲಮೇಲೆ ಕ
ಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯಂಬಟೆ ನಿಂಬೆ ನೆಲ್ಲಿಗಾಯ್ ।
ಕಪ್ಪುರಗಂಪನೊಪ್ಪಿಸುತಮಿರ್ಪರೆಮಾದುಫಲಂಗಳಾದಿಯಾ
ದುಪ್ಪಿನಕಾಯ್ಗಳಂ ಮಗಮಗಿಪ್ಪುವನಿಕ್ಕಿದನಬ್ಜಪತ್ರದೊಳ್ ‖ ೮೬
(ಲೀಲಾವತಿ, ೫–೭೧.)

ಗಾವಟೆ ಬೆಲ್ಲವತ್ತ ವರ ಮಾದಲವಂಬಟೆ ಚಿಲ್ಲು ಚೆಳ್ಳೆಗಾ
ಯ್ಮಾವಿನ ಕಾಯ್ಗಳೊಪ್ಪುವರಗಸ್ಪುರಮಾಗುಳಿಗಳ್ ಸುಧಾರಸಂ ।
ತೀವಿರೆ ಕಂಪು ಪೊಂಪುಳಿಸೆಯುಪ್ಪಿನಕಾಯ್ಗಳನೇಕಮಂ ಕಲಾ
ಕೋವಿದೆಯರ್ ಕೆಲಂಬರಿಯಲಿಕ್ಕಿದರಿಕ್ಕು ಮಗುಟ್ದೆನುತ್ತಿರಲ್ ‖ ೮೭

ನಳನಳಿಸುವ ಮೆಣಸಿನ ಕರೆ
ಹುಳಿಯಲ್ಲಂ ಬಿದಿರ ಕಟಿಲೆಯೇಲಕ್ಕೀಕಾಯ್ ।
ಕಳವೆಯ ಕಾಯ್ ನೇರಿಯಕಾಯ್
ಮೊಳಗಿನಕಾಯ್ ಬೇಱೆ ಬೇಱೆ ಸವಿವಡೆದಿರವೇ ‖ * ೮೮

ಕಡಲೆಯು ಬಾಡಿ ಬೆಂದುರುಳಿಗೊಂಡುದು ಸೊಂಡಗೆ ಕೂಡೆ ಸಂಬರಂ
ಬಿಡದಗಸುಂಟುಗೊಂಡುದು ಮೊಸರ್ ಕೆನೆಗೊಂಡುದು ತುಪ್ಪಮಿಂಪನೊಂ ।
ದೆಡೆಗೆ ತೆರಿಳ್ಚಿ ಕಂಪನೊಳಕೊಂಡುದು ಬಣ್ಣಿಸಿ ಪೇಟೆ ಚೆಲ್ವನ
ಪ್ಪಡಿಗೆಗಳೆಲ್ಲಮಿಲ್ಲಿ ದೊರೆಕೊಂಡಪುವೇನುಣಿಸೊಳ್ಪಿತಾದುದೋ ‖ ೮೯

ಗರಗರನಾದುದು [1]ಕೂಟ್ ನೆಯ್
[2]ಸು[2]ರಯಿಯು[1] ಕಂಪಾಯ್ತು ಸಟ್ಟುಗಕ್ಕಂ ಮೊಸರ್ಗಂ ।

---

* ಈ ಪದ್ಯ (ಕ) ಪ್ರತಿಯಲಿಲ್ಲ. [1] ಕ್ಕೆಯ್ಸುರಯಿಯು (ಬ). [2] ಸ್ಮ (ಕ.ಖ.ಬ).

ಪಿರಿದುಂ ಪೋರ್ಕುೞಿಯಾದುದು
ಕರಮಿನಿದಾಯ್ತುಱಿಕೆ ಹೊದಕನಲ್ಲದೆ ಹೊರಕಂ ॥ ೯೦

ರಸವೊಸರ್ವಂತಿರೆಯ್ದೆ ಪೊಸತಪ್ಪ ವಿನೋದದೊಳೆಯ್ದೆ ಸಂತಸಂ
ಮಸಗುವೊಲಂತಿರುಂಡು ಸಿರಿಗಂಧದ ಕರ್ಪುರವೊಂದು ಕೊಪ್ಪರ್ಸ್ ।
ಮಸಗುವ ನೀರದೊಂದು ಪುರುಷಂ ಬೆರಮುತ್ತಿೞಿಪೀರ್ದುರ್ ಪೀಳ್ದು ನೀ
ಳ್ದಸಿರ್ದುಸಿರ್ದಿಂಟಿದೇವ ಪೆಱತೇಂ ನುಡಿ ಸಂತಸದಂತನೆಯ್ದರೇ ?॥ ೯೧

ಪೊತ್ತದೆ ಪೊಗೆಸುತ್ತದೆ ನಸು
ಬತ್ತದೆ ಕೆಂಪಡರ್ದು ಬೆಂದ ಪಾಗಲಕಾಯಂ ।
ಪತ್ತೆಂಟು ತುತ್ತಿದಲ್ಲದೆ
ಚಿತ್ತಂ ತಣಿಗುಮೆ ಸರಸ್ವತೀಮಣಿಹಾರಾ ॥ ೯೨

ಬೆಳ್ಳಿಯ ಬೆಳ್ಪನಾವರಿಸಿ ಶಂಖದ ವರ್ಣಮನೌಂಕಿ ಕರ್ಪುರ
ಕ್ಕುಳ್ಳ ಗುಣಂಗಳಂ ತೊಱಿಸಿ ಮಲ್ಲಿಗೆಯೊಳ್ಸಮನಾಗಿ ತೋರ್ಪ ನೀ ।
ರುಳ್ಳಿಯುಗಡ್ಡೆಯಂ ಮನದೊಳಟ್ಟಿಯೊಳಾವಗವೊಂದುತಪ್ಪೆಯಂ
ಚಲ್ಲಿಸಿ ಜಾಜಿಯಂ ಕಲಸಿ ಮೆಲ್ಲದ ಮಾನವನೇನಬಲ್ಲವಂ ॥ ೯೩

ಏಗೆಟ್ಟುದೆಂದು ಪಟಿಯಾ
ಲ್ಕಾಗದು ಸತ್ಪುರುಷರಪ್ಪರಿನಿಸಿನಿಸಿಂದಂ ।
ಮೂಗಿಂಗೆ ಕಂಪನೊದವಿಪ
ದೋಗರದುಳ್ಳಿಯನೆ ಪಟಿದನಸುಗತಿಗಿಟಿದಂ ॥ ೯೪

ಮದಗಂದೇಭವಿಳಾಸಯಾನಮು[1]ನತ[1]ಪ್ರೋಡ್ಡೀನಯಾನಂ ತುರಂ
ಗದ[2]ವುಲ್ಲಂ[2]ಘಿತಯಾನ[3]ಮು[3]ಶ್ವತರಲೀಲಾಯಾನಮಾಂದೋಳಸಂ ।
ಮದಯಾನಂ ನೆಱೆದೊಪ್ಪಿ ರಾಜಗೃಹಮಂ ಪೊಕ್ಕಂ ಪುರಸ್ತ್ರೀಚಲ
ನ್ಮದಿರಾ[4]ಹಾರ[4]ಮರೀಚಿ [5]ಚಿತ್ರಿತಕದಂಬೀಭೂತಮಾಳಿವ್ರಜಾ[5] ॥ ೯೫

(ಅನಂತನಾಥಪುರಾಣಂ, ೭--೫೫.)

ಓರಂತೆ ಮೆಚ್ಚಿದಂ ಕೃತಿ
ಸಾರವನಕ್ರೀಡನಕ್ಕೆ ಹೊಯ್ಸಳವಂಶೋ ।

---

[1] ರದ (ಅ). [2] ಪೋರಂ (ಅ). [3] ವಿ (ಕ.ಖ.ಬ). [4] ಪಾಂಗ (ಅ).
[5] ಬಂಧಿದಿಗೊರ್ಳಲ್ ತನ್ನಂ ಮಹೋತ್ಸಾಹದಿಂ (ಅ).

ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ॥ ೯೬

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತ್ಯ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ವನವಿಹಾರವರ್ಣನಂ ಏಕಾದಶಾಶ್ವಾಸಂ ಸಂಪೂರ್ಣಂ.



೧

# ಜಲಕ್ರೀಡಾವರ್ಣನಂ

ಬೆಮರಂ ವಾರಿವಿಲಾಸಮಂ ಸಲಿಲಧಾರಾಯಂತ್ರಮಂ [1]ವಾಃ[1]ಪ್ರವೇ
ಶಮನಾಲೇಪನ ಕಂಪಮಂ [2]ಮುಳಿಸು ಲೀಲಾ[2]ಯುದ್ಧಮಂ ಕಾಮಿನೀ।
ಶ್ರಮಮಂ ಮೂಡಿ ಮುೞುಂಗುತಿರ್ಪ ಪರಿಯಂ [3]ಮೆಯ್ಯುರ್ಬುವಂ ಚೆಲ್ವು[3]ಮಂ
ಕ್ರಮದಿಂದಂ ಪೊಱಮಟ್ಟು ನಿಂದ ನಿಲವಂ ಪೇೞ್ವರ್ ಜಲಕ್ರೀಡೆಯೊಳ್ ॥ ೧

ವನಲಕ್ಷ್ಮೀಶತಮಂಗಜಂಗೆ ಶತಸಾಹಸ್ರಪ್ರಸೂನೇಕ್ಷುಚಾ
ಪನಿಕಾಯಂಗಳನೀವವೋಲ್ ತರುಣಿಯರ್ ತಂದಿತ್ತು [4]ವಂ[4] ಪುಷ್ಪಮಂ ।
ಡನಮಂ ತಾಳ್ದಿ ಸರೋವರಕ್ಕೆ ತಳರ್ದಂ ವಾಃಕೇಳಿ[5]ಶಕ್ರಪ್ರಭೂ
ಪನ ತಾಮ್ರ[5]ದ್ವಿಪದಂತಿರುನ್ನಮಿತಯಾನಂ ರತ್ನಮಾಲಾನ್ವಿತಂ ॥ ೨

(ಅನಂತನಾಥಪುರಾಣಂ, ೭–೨೪.)

ನೆಲೆವೊಲೆ ಪೊಣರ್ವಕ್ಕಿಗಳಂ
ವಳಿ ವಳಿಗಳನಾಸ್ಯಬಿಂಬಮಂಬುರುಹಮನ ।
ಗ್ಗಲಿಸೆ ಕಲಹಂಸಯಾನೆಯ
ರಲಗೊರ್ಳನಲಗೊರ್ಳಕೆ ಬಿರ್ದುವಂದಂತಿರ್ದರ್ ॥ ೩

(ಅನಂತನಾಥಪುರಾಣಂ, ೭–೨೬.).

ವನಕೇಳೀಶ್ರಾಂತಕಾಂತಾಜನದ ಮುಖಸರೋಜಂಗಳೊಳ್ ಪಾಯ್ದು ತುಂತು
ರ್ವನಿಯಂ ಪೇೞುತ್ತೆ ಮತ್ತ[6]ಶ್ರ[6]ಮಸುರಭಿಪಯೋಬಿಂದುವಂ ತಂದು ನೀರ್ವೂ ।
ವಿನ ಕಂಪಂ ಕೊಟ್ಟು ಪರ್ಬಿತ್ತಭಿನವಮಧುರಾಮೋದನಿಃಶ್ವಾಸದಿಂ ತ
ಣ್ಣನೆ ತೀಡಿ[7]ತ್ತೊ[7]ಂದು ಭೃಂಗದ್ವಿಗುಣಿತಗಣಿಕಾಕೇಶಭಾರಂ ಸಮೀರಂ ॥ ೪

(ಲೀಲಾವತಿ., ೧೩–೧೧೩.)

ಅಳಿಗಳ ರತ್ನಕದಂಬದ
ಬೆಳಗಿಂ ಬಹುವರ್ಣಜಲಮನಾಂತಕಟಾಗುಂ ।

---

[1] ವಾರಿ (ಅ. ಕವಿಚ). [2] ತುಮುಳಿಲಾ (ಖ.ಬ). [3] ಮೇಲ್ಪಟ್ಟವರ್ಣಶ್ರಮಂ (ಖ.ಬ). [4] ಮುಂ (ಖ.ಬ). [5] ಶಕ್ರಾಭ್ರಮೂಪನತಾಭ್ರ (ಅ). [6] ಭ್ರ (ಅ). [7] ತ್ತಂ (ಅ).

ಗಳ ನಡುವೆ ಪೆತ್ತ ಮಱಿಯಂ
ಪಿಳುಗಾಡಿಸುವಂತೆ ಸರಸಿ ಪಡೆದುದು ಚೆಲ್ವಂ ‖ ೫

(ಅನಂತನಾಥಪುರಾಣಂ, ೭–೨೫.)

ಹರಿನೀಲೋಪಲಪಟ್ಟಿಕಾಘಟಿತ ಸೋಪಾನಂಗಳೊಳ್ ತೀರಮಂ
ದರ ಕಲ್ಲೋಲವಿಲೋಲಮಾಳಿಕೆಗಳೊಳ್ ಕಾಂತಾಪ್ರತಿಚ್ಛಾಯೆ ತ ।
ಳ್ತಿರೆ ಕಾಸಾರಮಿದಲ್ಲದಲ್ಲದು ಮನೋಜಬ್ರಹ್ಮನಿರ್ಮಾಣನಂ
ತರುಣೀರತ್ನಮಹಾನಿಧಾನಮೆನೆ ಕಣ್ಗಿಂಬಾಯ್ತು ಪದ್ಮಾಕರಂ ‖ ೬

(ಅನಂತನಾಥಪುರಾಣಂ, ೭–೩೨.)

ಬನದೊಳಗುಳ್ಳ ಹಂಸೆ ಗಿಳಿ ಕೋಗಿಲೆಯೆಂಬಿವು ಮೆಚ್ಚಿ ಬಂದುವಂ
ಗನೆಯರ ಭಂಗಿವೆತ್ತ ನಳಿತೋಳ್ಗಳಿಗೆಂಬಿನಮೇಂ ಸರೋಜಲೋ ।
ಚನೆಯರ ಕಯ್ಯೊಳೊಪ್ಪಿದುವು ಮುತ್ತಿನ ಸುತ್ತಿನ ಪಚ್ಚೆಸಾರದ
ಚ್ಚಿನ ಹರಿನೀಲಮಾಲಿಕೆಯ ಸಂಘಟನಾಜಲಯಂತ್ರಸಂಕುಲಂ ‖ ೭

(ಅನಂತನಾಥಪುರಾಣಂ, ೭–೨೭.)

ಅರಗಿಳಿಯಂಚೆ ಕೊಂಚೆ ಪೊಣರ್ವಕ್ಕಿ ಕುಕಿಲ್ ನವಿಲಬ್ಜಮುತ್ಪಲಂ
ಕರಿ ತುರಗಂ ಗಜಾರಿ ಮಕರಂ ಮೃಗಮೆಂಬಿವಱೊಂದು ಮಾಟ್ಕೆಯಿಂ ।
ಪರಿಜಳವಟ್ಟ ಜೀರ್ಕೊಟವಿಗಳ್ ಕರಪಲ್ಲವದೊಳ್ ವಿಳಾಸಮಂ
ಧರಿಯಿಸೆ ಜಂತ್ರಕಾರ್ತಿಯರಪೊಲ್ ನೃಪಕಾಂತೆಯರಾದವೊಪ್ಪಿದರ್ ‖ ೮

ಕಡುನೀಱೆ ಜಂತ್ರದಂಚೆಯ
ನಡಿಗಡಿಗಾ ನೀರೊಳದ್ದಿದಳ್ [1]ನಡೆಯೊಳ್ ತಾಂ ।
ಗಡಣಂ[1] ಬರೆ ಪುರುಡಿಪ್ಪವೆ
ನ್ನೊಡ[2]ನೆಂದೊಯ್ದೊಯ್ದು[2] ಪುಡುಕನೀರದ್ದುವವೊಲ್ ‖ ೯

(ಮಲ್ಲಿನಾಥಪುರಾಣಂ, ೬–೧೧೦.)

ನೆಲೆಯಂ ನೋಡಿಸಿ ಮುನ್ನ ನೋಡಿದವರಿಂ ಮತ್ತಾ ಮನಶ್ಶಂಕೆಯಿಂ
ಮಲರುತ್ತುಂ ಸಖಿಯರ್ಕಳಂ ಪಿಡಿಯುತುಂ ನಿಂದೂರುಮಂ ಪೊಕ್ಕು ಜ ।
ಕ್ಕುಲಿಸುತ್ತುಂ ತೊಡೆತುಂಬಿ ಮೆಯ್ಯುಗಿವುತುಂ ಮೈದೋರ್ಪ ಮೀಂಗಂ ವಲಂ
ಕೆಲೆನುತ್ತುಂ ಕಡುಗಾಡಿ ಮಿಕ್ಕ ಕೊಳನಂ ಪೊಕ್ಕರ್ ಕೆಲರ್ ಬಾಲೆಯರ್ ‖ ೧೦

---

[1] ವೆಡೆಯೊಳ್ ಗಡನಾಣ್ಚದೆ (ಅ). [2] ನೆಂದುಯ್ದಲ್ಲಿ (ಅ) ನೊಡನೆಂದೊಯ್ದು (ಕ).

ಇಟಿದೊಡೆ ಕೂರದ ಪೆಂಡಿರ
ಕೆಟಗಾದಪೆವೆಂದು ರತ್ನಸೋಪಾನಕದೊಳ್ ।
ಗಟಗಟನಿಟಿಯದೆ ಬಾಣಿತಿ
ಪೊಱಮೆಮೆಟ್ಟುವ ತೆಱದಿ ಗುಜ್ಜುಮೆಟ್ಟುವರರೆಬರ್ ॥ ೧೧
(ಅನಂತನಾಥಪುರಾಣಂ, ೭–೩೪.)

ಬಕ ಕು[1]ರ[1]ರ ಪಕ್ಷವಿಕ್ಷಿ
ಪ್ತ ಕಂಜಕಿಂಜಲ್ಕಪುಂಜ ಪಿಂಜರಿತಾಚ್ಛೋ ।
ದಕ ಪರಿಪೂರ್ಣತಟಾಕ
ಪ್ರಕರಸರೋನಿಕರರಂಜಿತಾಶಾವ[2]ಲ[2]ಯಂ ॥ ೧೨
(ಆದಿಪುರಾಣಂ, ೧–೫೮; ಕಾವ್ಯಾವಲೋಕನಂ, ೫೧೬.)

ಜಳಪಕ್ಷಿವ್ರಾತ ಕೋಲಾಹಲವೊಗೆವಿನೆಗಂ ಪಕ್ಕವಾದ್ಯಂಬೊಲುದ್ಯ
ನ್ನಳಿನೀಕಿಂಜಲ್ಕಪುಂಜಾವೃತಿ ಜವನಿಕೆವೋಲ್ ಪಿಂಗೆ [3]ಭೃಂ[3]ಗಾಳಿಯಿಂ ಪೊ ।
ಗೊಳನಂ ಪೊ[4]ಕ್ಕಂತು[4] ರಂಗಂಬುಗುವ ತೆಱದೆ ನೇತ್ರಪ್ರಭಾಜಾಲಪುಷ್ಪಾಂ
ಜಳಿಯಂ ಸೂಸುತ್ತೆ ಕಾಂತಾಜನಮದು ಜಲಕೇ[5]ಳ್ಯುಜ್ವಲಲ್ಲಾಸ್ಯ[5]ಲೋಲಂ ॥ ೧೩
(ಲೀಲಾವತಿ, ೧೩–೧೧೫.)

ಸೆಳೆ[6]ದು[6] ಮರ[7]ಲ್ಚಿ[7] ಸೋಗೆನಿಱಿಯಂ ಮೃದುಜಂಘೆಯನೊಯ್ಯನ[8]ಟ್ಟಿ[8] ಮೈ
ಪುಳಕಿಸಿ ಸೋಂಕಿ ನುಣ್ದೊಡೆಯ ಮೆಲ್ದ[9]ಳ[9]ಮಂ ಬಿಡೆ ತಳ್ತು ಮಧ್ಯಮಂ ।
ಕಳಶಕುಚಂಗಳಂತ[10]ರದೆ[10] ಪೊ[11]ಕ್ಕು[11]ಳಿವಲ್ಲಿ ತರಂಗಹಸ್ತದಿಂ
ಮಳಯಸಮೀರಣಂ ಸರಸವಾಡಿದನಗ್ಗದ ಪೆಂಡವಾಸಮಂ ॥ ೧೪
(ಅನಂತನಾಥಪುರಾಣಂ, ೭–೩೩.)

ತೆರೆಗಯ್ಯಿಂ ತುಡುಕುತ್ತುಮೊಳ್ದೊಡೆಯುನಾದಂ ನೀವಿಯಂ ನೀವಿ ಬಿ
ತ್ತರಿಸುತ್ತುಂ ವಳಿಯಂ ಪಳಂಚಿಱಿಯುತುಂ ವಕ್ಷೋಜಮಂ ಸಿಳ್ಕಿ ನೇ ।
ವರಿಸುತ್ತುಂ ನೆಲೆವೆರ್ಚೆ ಕಾಮುಕನವೊಲ್ ನೀರೇಱುತಿರ್ದತ್ತು ತ
ತ್ತರುಣೀಸಂಕುಳಮೆಲ್ಲಮೀಗಳೊಳಗಾಯ್ತೆಂಬಂತೆ ಪದ್ಮಾಕರಂ ॥ ೧೫
(ಚಂದ್ರಪ್ರಭಪುರಾಣಂ, ೭–೧೨೬.)

ಇದು ಪಿರಿದುಂ ವಸಂತ[12]ಸಖ[12]ಯೌವನರತ್ನನಿಧಾನಮಂತದ
ಲ್ತಿದು ಕುಸುಮಾಸ್ತ್ರಶಸ್ತ್ರಚಯಕೋಶಮ[13]ಹೀ[13]ಗೃಹಮಂತದಲ್ತು ಮ ।

1 ಕ (ಕ.ಖ.ಬ). 2 ಳಿ (ಖ.ಬ). 3 ಸುಯ್ (ಅ). 4 ಕ್ಕರ್ತ (ಖ.ಬ). 5 ಳೀಚಲಲ್ಲಾಸ್ಯ (ಖ.ಬ). 6 ವ (ಖ.ಬ). 7 ಲ್ವ (ಕ.ಖ.ಬ) 8 ಟೆ (ಅ). 9 ಡ (ಅ). 10 ಳೆದು (ಅ). 11 ಕ್ಕಿ (ಅ). 12 ಸಖಿ (ಅ). ಸಿಖ (ಕ). 13 ಹಾ (ಖ.ಬ).

ತ್ತಿದು ರತಿನಾಥಕಲ್ಪಲತಿಕಾಪ್ರ[1]ಕರ್ಶೈ[1]ಕ ಕೃತಾಲವಾಲಮಂ
ಬುದನೆನಿಸಿತ್ತು ಸಂದಣಿಸಿ ನಿಂದಬಲಾವಳಿಯಿಂದೆ ಪೂಗೊಳಂ ॥ ೧೬

(ಚಂದ್ರಪ್ರಭಪುರಾಣಂ, ೭–೧೨೭.)

ಕೀರದ ಹಂಸದ ಪಿಕದ ಚ
ಕೋರದ ಚಕ್ರಾಹ್ವದಂತೆ ಮಾಡಿದ ಗರುಡೋ ।
ದ್ಗಾರದ ಮುತ್ತಿನ ನೀಲದ
ಹೀರದ ಮಾಣಿಕದ [2]ಪೊಳೆವ[2] ಜೀರ್ಕೊಟವೆಗಳಂ ॥ ೧೭

(ಚಂದ್ರಪ್ರಭಪುರಾಣಂ, ೭–೧೨೮.)

ಚರಣೋಪಾಸನೆಗೆಯ್ದು ಮೆಲ್ಲನೆ ಕಟಾಂತರ್ಭಾಗ[3]ದಿಂ[3]ದೂರುವಂ
ತೆರೆಗಯ್ಯಿಂ ಪೊಡೆದೇಱನೂಂಕಿ ಪುಳಕಶ್ರೀಯಂ ತ[4][ನೂಲೇ][4]ಱೆಯೊಳ್ ।
ವರನಾರೀಜನಕುಂಟುಮಾಡಿ ಸಲಿಲಕ್ರೀಡಾಸಮುದ್ಯೋಗವೊಳ್
ಸುರತೋದ್ಯೋಗಿಯ ಪಾಂಗಿಯಿಂದ ಕಡುಚೆಲ್ವಂ ತಾಳ್ದುದಬ್ಜಾಕರಂ ॥ ೧೮

ನಿಱಿಯಂ ಸೂಸಿ ಕಲಂಕಿ ನುಣ್ದೊಡೆಗಳೊಳ್ ಕಯ್ಯಿಕ್ಕಿ ಮೆಯ್ವೆರ್ಚುತುಂ
ಪೊಱವಾಱಂ ಪರಿದೇಱಿ ಪೊಕ್ಕು ಪೊಕ್ಕುಳೊಳಪೊಕ್ಕೆಯ್ತಂದು ಸವ್ಯಾನಮಂ ।
ತೆಱೆದುತ್ತುಂಗ ಕುಚಾಗ್ರಮಂ ತುಡುಕಿ ಗಾಢಾಲಿಂಗನಂಗೆಯ್ದು ಕೈ
ಸೆಱೆಗೊಂಡತ್ತು ತರಂಗಸಂಹತವಿಟಾನಂಗೋದ್ಭವಕ್ರೀಡೆಯಂ ॥ ೧೯

ತುಡಿಸುತ್ತುಂ ನೀರನಂಗದ್ಯುತಿಯಿನವಯವಚ್ಛಾಯೆಯಿಂ ತಮ್ಮನಂದಿ
ರ್ಮುಡಿಸುತ್ತುಂ ನೇತ್ರನೀಲೋತ್ಪಲದ ನೆಟಲ ಬಂಬಲ್ಗಳಿಂ ನೆಯ್ದಿಲಂ ನೂ ।
ರ್ಮುಡಿಸುತ್ತುಂ ವಕ್ತ್ರಕಂಜಂಗಳೊಳೆ ಕಮಲಪುಂಜಂಗಳಂ ಕೂಡೆ ಸಾಸಿ
ರ್ಮುಡಿಸುತ್ತುಂ ಪೊಕ್ಕುದಬ್ಜಾಕರಮನೊಲವಿನಿಂ ಕಾಂತಕಾಂತಾಕದಂಬಂ ॥ ೨೦

(ಲೀಲಾವತಿ, ೧೩–೧೧೬.)

ಲಲನೆಯರ ನೊಸಲ ಕದಪಿನ
ಮೊಲೆಗೆಲದ ಪೊದಟ್ದ ಬೆಮರಬಿಂದುಗಳಾಗಳ್ ।
ಜಲಕೇಳಿಗೆಳಸಿದುದನಱಿ
ಗಲಿಪಲೊಡಂ ತಳರ್ದು ಕೊಳಕೆ ನೃಪಕಳಹಂಸಂ ॥ ೨೧

ತೆರೆಗಳ್ ವಕ್ಷೋಜಘಾತಕ್ಕಗಿದು ತೆಗೆವವೋಲ್[5]ಮೀ[5]ಱೆ ಮರ್ಯಾದೆಯಂ ವಾ
ರಿರುಹಂಗಳ್ ವಕ್ತ್ರಚಂದ್ರಪ್ರಭೆಗೆ ಬೆ[6]ಗಡು[6]ಗೊಂಡಂತೆ ನೀರೊಳ್ ಮುಱುಂಗು ।

---

[1] ಮದ್ಯೆ (ಕವಿಚರಿತ್ರೆ ಸಂ ೧=೩೭-೮). [2] ಪಲವು (ಖ.ಬ). [3] ಮಂ (ಕ). [4] ನುರ್ಲೆ (ಕ.ಖ.ಬ). [5] ನೀ (ಖ.ಅ). [6] ಡಗು (ಬ).

ತ್ತಿರೆ ಹ[1]ಸ್ತಾಂಭೋಜದಿಂ[1]ದುತ್ಪಲದಳಿಕುಳಮಂ ಸೋವುತುಂ [2]ಪೊ[2]ಕ್ಕುದಬ್ಜಾ
ಕರಮಂ ಕಾಂತಾಜನಂ ಪೆರ್ಚಿ[3]ಸುತುಮುಲಘನಕಾಂಚೀಪದಾಪೂರದಿಂದಂ[3] ‖ ೨೨

(ಲೀಲಾವತಿ, ೧೩–೧೧೭.)

ನಿಱಿ ತೆಕ್ಕಿದರಳೆ ತೆರೆಗಳ್
ಪೊಱವಾಱಿಂ ಭೋಂಕನಪ್ಪೆ ಘನನುಣ್ಬೊಡೆಯಂ ।
ನಿಱಿ ಸೋಂಕಿ ಸೋಂಕೆ ಕೊಳನಂ
ತುಱುಗೆವೆಗಳ್ ತುಱುಗೆ ಪೊಕ್ಕುದಬಲಾನೀಕಂ ‖ ೨೩

ತೆರೆಗಯ್ಗಳಿಂದಮಾಂತುದು
ಸರೋವರಂ ನಿಱಿಯ ತೆಕ್ಕೆಯಂ ಮದನಮಹಾ ।
ಗುರುವೋದಿಸಲ್ಕೆ ಬಿರ್ಚಿದ
ಸುರತದ ಹೊತ್ತಗೆಯನಾಂತ ಶಿಷ್ಯರ ತೆಱದಿಂ ‖ ೨೪

ಪುದಿದಿರೆ ಪಕ್ಷದವೋಲ್ ಮೃಗ
ಮದಪತ್ರಂ ಕಾಂತಕರಜ ಕುಲಿಶಕ್ಷತಕ ।
ಳ್ಕಿದವೋಲ್ ಪೊಕ್ಕವು ಕೊಳನಂ
ಬುದಧಿಯನಬಲೆಯರ ಕಠಿನಕುಚಕುಲಗಿರಿಗಳ್ ‖ ೨೫

ಕಳನೂಪುರ ನಿನದಂಗಳ
ನೆಳವೆಂಡಿರ್ ಬಯಕೆಗೊಟ್ಟರಕ್ಕುಮೆ ಹಂಸಾ ।
ವಳಿಗನೆ ಕೊಳನಂ ಪೊಕ್ಕಾ
ಗಳೆ ಮಾಣ್ದವು ಗಾಡಿವಡೆದ ನೇವುರದನಿಗಳ್ ‖ ೨೬

ಲಲಿತಂ ಕಾಮುಕನಂತೆವೊ
ಲೊಳಪೊಕ್ಕೊಳ್ಬೊಡೆಯನೆಱವಿ ಕಾಂಚೀಪದಮಂ ।
ಬಳಸಿ ವಿಟನಂತೆ ನಾಭಿ
ಸ್ಥಳದೊಳ್ ನೆಲೆಗೊಂಡು ನಿಂದುದಾ ಕಾಸಾರಂ ‖ ೨೭

ಅವರೋ[4]ಹ[4]ಪ್ರಮದಾಕದಂಬವಿ[5]ದ[5]ಳತ್ಕಾಶ್ಮೀರಸಾರಂ ಮೃಗೋ
ದ್ಭವಕ[6]ಲ್ಪಂ[6] ಘನಸಾರರೇಣುಪಟಲಂ ಶ್ರೀಖಂಡಜಂ ಬಾ[7]ಳಮೆಂ[7] ।

---

[1] ಸ್ತಾಬ್ಜಂಗಳಿಂ (ಅ). [2] ಮಿ (ಕ.ಖ.ಬ). [3] ಸಿದುದಲಘುಕಾಂತಾಪದಾಪಾತದಿಂದಂ (ಖ.ಬ). [4] ಧ (ಅ). [5] ಗ (ಅ). [6] ಲ್ಕಂ (ಗ). [7] ಳೆಯಂ (ಅ).

ಬಿವಱಿಂ [1]ತೀವೆ[1] ತರಂಗಮಾಲೆ ರತಿ ಕಂದರ್ಪಂಗೆ ತೀವಿ[2]ಟ್ಟ[2] ಬ
ಣ್ಣವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ ಸುಖಾಸಾರಮುಂ ॥ ೨೮

(ಅನಂತನಾಥಪುರಾಣಂ, ೭–೫೨.)

ಅಡರೆ ಕವಲ್ತುದೊಂದೆಡೆ ಮೃಗೋದ್ಭವದಿಂ ಬೆಳರ್ವಟ್ಟು ನಿಂದುದೊಂ
ದೆಡೆ ಮಲಯೋದ್ಭವಪ್ರಸರ[3]ದಿಂ ಕದಡಿಂ[3] ಕಡುಗೆಂಕಮಾದುದೊಂ ।
ದೆಡೆ ನವಕುಂಕುಮದ್ರವದಿನುರ್ಬಿಪ ಕ[4]ರ್ಪಿಡಿದಿ[4]ರ್ಪನಾಳ್ದುದೊಂ
ದೆಡೆ ಪರಿಮಿಶ್ರಿತಾ[5]ರ್ದ್ರ[5]ಮಹಿಷೀ ರಸದಿಂ ಸರಸೀವಿಭಾಗದೊಳ್ ॥ ೨೯

(ಶಾಂತಿಪುರಾಣಂ, ೮–೨೯.)

ತೊಟ್ಟನೆ ಮಂಗಳಾನಕರವಂ ನೆಲೆವೆರ್ಚೆ ಸರಿತ್ತಟಂಗಳೊಳ್
ಕಟ್ಟಿದಿರಾಗಿ ಸಾರ್ಚೆ ನೃಪವಲ್ಲಭನಂ ಪೊಸಪೂವಿನಿಂದಮಾ ।
ಯ್ದಿಟ್ಟೊಡನಾರ್ದು ವಾರವಧುವರ್ ಜಳಯಂತ್ರದಿನೊತ್ತೆ ಚಿತ್ರಮಂ
ನಿಟ್ಟಿಸಿ ಬಂದು ಪತ್ತಿದುವು ಸಂಧಿಸಿ ಕುಂಕುಮವಾರಿಧಾರೆಗಳ್ ॥ ೩೦

ಪರಿದೊಳಪೊಕ್ಕು ಜೀರ್ಕೊಳ[6]ವೆ[6]ಯಂ ತೆಗೆ[7]ದೆ[7]ತ್ತಿದ ಕಯ್ಯೊಳೊರ್ವರೊ
ರ್ವರನಿರದೊತ್ತೆ ಪಂಜರಿಸೆ ಮೇಲೆ ಮುಸುಂಕುವ ಕುಂಕುಮಾಂಬುಸಂ ।
ಕರದೊಳದೊಂದು ಕೆಮ್ಮುಗಿಲ ಕಾವಣದೊಳ್ ಕುಡುಮಿಂಚುಗಳ್ ತಡಂ
ಬರಿ[8]ದ[8]ವೊಲೇಂ ಬೆಡಂಗ[9]ಮರ್ದುದೋ[9] ರುಚಿ[10]ಮದ್ವಿ[10]ಚಳಲ್ಲತಾಂಗಿಯರ್ ॥ ೩೧

(ಅನಂತನಾಥಪುರಾಣಂ, ೭–೨೮.)

ಮಿಸು[11]ಪಲ್[11] ತೋಳಪೊದಲ್ ತುಳುಂಕೆ ಮೊಲೆ ಮುಯ್ವಂ ಮೀಱೆ ಗಾತ್ರಾ
ಪ್ರಸರಂಬೆತ್ತಿರೆ ಕೊಂಕಿ ಬ[12]ಳ್ಕೆ[12] ನಡು ಕೊಂಬಂ ತೀವಿಕೊಂಡೆತ್ತಿ ಪೂ । [ಪರಂ
ಣಿಸಿ ತನ್ನಂ ಬಿಡೆ ಪೊಯ್ದು ಪೋಪವಳ ನಿಂದೊಡ್ಡೊಡ್ಡೆನುತ್ತೊರ್ವಳೊ
ಡ್ಡಿಸಿ ಪೊಯ್ಯಲ್ ನಿಮಿರ್ದೊಂ[13]ದೆ[13] ಭಾವದೊಳೆ ಭಾವೋದ್ಭೂತನಾದಂ ಸ್ಮರಂ ॥

(ಅನಂತನಾಥಪುರಾಣಂ, ೭–೨೯.)

ಮಂಡಳಿಗೊಂಡು ಸಿಂಪಿಸುವ ಕುಂಕುಮವಾರಿಯ ಬೆನ್ನ ಕೆಂಪು ಕೈ
ಕೊಂಡು ದುಕೂಲಚೇಲದ ವಿಲಾಸಿನಿಯರ್ಕಳ ದೇಸೆ [14]ತಂ[14]ದುದಿಂ ।

---

[1] ತೇಂಗೆ (ಅ). [2] ರ್ದ (ಕೆ.ಖ.ಬ). [3] ದೊಳ್ ಮೂದದಿಂ (ಕ.ಖ). [4] ರ್ಪಿನದಿ (ಅ). [5] ದ್ರಿ (ಖ.ಬ). [6] ವಿ (ಖ.ಬ). [7] ದೊ (ಕ.ಖ.ಬ). [8] ವ (ಅ). [9] ಡರ್ದರೋ (ಅ). [10] ರು (ಖ.ಬ). [11] ಪಂ (ಅ). [12] ಳ್ಕಿ (ಖ.ಬ). [13] ದ (ಅ). [14] ವಂ (ಖ.ಬ).

ದುಂಡಿಗೆ ಸಾಧ್ಯಮಾಯ್ತೆನಗೆ ಮೂಜಗಮೀ ಜಲಕೇಳಿಯಿಂದಮೆಂ
ದುಂಡಿಗೆಯೊತ್ತಿ ತೋಱಿಸಿ ತೆರಳ್ಚಿದನಂಗಜನೆಂಬ ಭಂಗಿಯಂ ॥ ೩೩

(ಅನಂತನಾಥಪುರಾಣಂ, ೭–೩೦.)

ಇಟಿಪಿದ ಕಟಾಹಶತದೊಳ್
ಸುಟಿಸುಟಿದೋರೊರ್ಮೆ ಮೊಗೆಯಲೆ[1]ಯ್ದುವ[1] ನೀರ್ ಜೀ ।
ಕೆರ್ಱಟಿವೆಯ ಕೊಂಬಿನ ಜಂತ್ರದ
ಘಟಿಯು[2]ಕ್ಕೆಂ ಪಿ[2]ರಿದೊ ನೃಪನ ವನಿತಾನಿವಹಂ ॥ ೩೪

(ಅನಂತನಾಥಪುರಾಣಂ, ೭–೩೧.)

ಜಳಜಾತದ್ವಯಮೇತಮೆತ್ತಿದಪುವಂಭೋಜಾಳಿಗೆಂಬಂತೆ ಕೆಂ
ದಳಿರ್ಗಳ್ಗೊಂದಳಮರ್ಘ್ಯಮಿತ್ತಪುವು ಶೀತದ್ಯೋತಿಗೆಂಬಂತೆ ಕೋ ।
ಮಳೆಯರ್ ಕೆಂದಳದಿಂ ಮೊಗಕ್ಕೆ ಜಳಮಂ ತುಳ್ಕಾ[3]ಡಿ ಮು[3]ಟ್ಕಾಡಿದರ್
ಪ್ರಳಯಕ್ಷುಬ್ಧಮನೋ[1]ಜವಾರ್ಧಿ[1]ಗಳೊಳೆತ್ತಲ್ ನೋಡೆ ಚಿತ್ತಪ್ರಿಯಂ ॥ ೩೫

(ಅನಂತನಾಥಪುರಾಣಂ, ೭–೩೬.)

ಸುರದೀರ್ಘಿಕೆಯೊಳ್ ಕರಪು
ಷ್ಕರದಿಂದಭ್ರಮುಮನಭ್ರಮೂಪತಿ ತಳಿವಂ ।
ತಿರೆ ಜಳಯಂತ್ರದೆ ತಳಿದಂ
ಸರಸಿಯೊಳರಸಂ ಶಶಿಪ್ರಭಾವಲ್ಲಭೆಯಂ ॥ ೩೬

(ಚಂದ್ರಪ್ರಭಪುರಾಣಂ, ೭–೧೨೯.)

ಜಲಯಂತ್ರಮನೊತ್ತೆ ನೃಪಂ
ಲಲನೆಯ ಕುಚಯುಗಳ ಮಧ್ಯದಿಂದಿಟಿಯಲ್ ತ ।
ಜ್ಜಳಕೆ ತೆಱಪೀಯದಿರ್ದ
ತ್ತೊಳಕೊಂಡ ಪಯೋಧರಾಖ್ಯೆಯಂ ಪ್ರಕಟಿಪವೋಲ್ ॥ ೩೭

(ಚಂದ್ರಪ್ರಭಪುರಾಣಂ, ೭–೧೩೦.)

ನಾರಿಯ ಮೊಗಮಿನನೊತ್ತುವ
ಧಾರಾಪಾತಕ್ಕೆ ಬೆರ್ಚಿ ಜಿತವಾರಿರುಹಂ ।
ವಾರಿರುಹದ ಮಱೆಗೊಂಡುದು
ಭೀರುವನೋಲಗಿಸಿದರ್ಗೆ ಪೇೞ್ ಬಲಮುಂಟೆ ॥ ೩೮

---

[1] ಯ್ದುವೆ (ಅ). [2] ಕ್ಕನಿವಿ (ಅ). [3] ಡೆತು (ಅ). [4] ಭವಾಬ್ಧಿ (ಅ).

ಮಡದಿಯ ಮೇಲಿಳಾಧಿಪತಿ ಕತ್ತುರಿನೀರ್ಗಳನೊತ್ತೆ ಕೂಡೆ ಪಾ
ಯ್ದಡಸಿದ ಧಾರೆಯಿಂ ವದನಪಂಕರುಹಂ ಮಱಿದುಂಬಿವಾಲೆಯುಂ ।
ಪಡೆದುದು ಕರ್ಣಪೂರದಸಿತೋತ್ಪಲಮಂಜರಿ ನೀಳನಾಳಮಂ
ಪಡೆದುದು ಮೌರ್ವಿಯಂ ಪಡೆದುದಾಕೆಯ ಮಧ್ಯಮನೋಜಕಾರ್ಮುಕಂ ॥ ೩೯

(ಅನಂತನಾಥಪುರಾಣಂ, ೭–೪೧.)

ತರಳಾಪಾಂಗಲಸದ್ವಿಲಾಸರಸದಿಂದೋರೊರ್ಮೆ ಲೀಲಾಪ್ರತಿ
ಸ್ಫುರಿತಭ್ರೂಯುಗವಿಭ್ರಮೈಕರಸದಿಂದೋರೊರ್ಮೆ ಸಸ್ನೇಹಭಾ ।
ಸುರಚಿತ್ತಪ್ರಸಭೋತ್ಥಭಾವರಸದಿಂದೋರೊರ್ಮೆ ಮಾದೇವಿ ಭೂ
ವರನಂ ಸಿಂಪಿಸಿದಳ್ ಸುಗಂಧರಸದಿಂದೋರೊರ್ಮೆ ತತ್ಕೇಳಿಯೊಳ್ ॥ ೪೦

(ಚಂದ್ರಪ್ರಭಪುರಾಣಂ, ೭–೧೩೨.)

ಪ್ರಮದೆಯರಂ ಮನೋಭವನೆ ಸೂೞಱಿದೆಚ್ಚಪನಗ್ನಿಬಾಣದಿಂ
ಹಿಮಕರಬಾಣದಿಂ ತಿಮಿರಬಾಣದಿನೆಂಬಿನಮಿಂಬುವೆತ್ತುದೇಂ ।
ನಿಮಿರ್ದುರ್[1]ವೊ[1] ಲೀಲೆಯಿಂದೆ ಜಳಯಂತ್ರಮನಂದು ಮಹೀಶನೊ[2]ತ್ತೆ[2] ಕುಂ
ಕುಮಜಳ ಚಂದನೋದಕ ಮೃಗೋದ್ಭವ ವಾರಿನಿಯುಕ್ತಧಾರೆಗಳ್ ॥ ೪೧

(ಚಂದ್ರಪ್ರಭಪುರಾಣಂ, ೭–೧೩೩.)

ಇಟ್ಟಳಮಿಟ್ಟೞಿಮುಳಿಸಿಂ
ದಿಟ್ಟಳ್ ಕವಿರಾಜ[3]ಹಂಸ[3]ನಂ ಕಡೆಗಣ್ಗಳ್ ।
ನಟ್ಟ ಬೞಿವಿಡಿದು ನನೆಗಣೆ
ನಟ್ಟವೊಲಿರೆ ತಳದೊಳಡಸಿ ತೀವಿದ ನನೆಯಿಂ ॥ ೪೨

(ಲೀಲಾವತಿ, ೧೩–೧೫೮.)

ಸವತಿಯ ಮೇಲೆ ಜೀರ್ಕೊೞವೆಯಂ ತೆಗೆದೊತ್ತೆ ಮನಃಪ್ರಿಯಂ ಕಲಂ
ಕುವ ಬಗೆ ಕೆಂಕಮಾದ ಕಡೆಗಣ್ ತಳಿರ್ವಣ್ಣಮನಾಳ್ದ ತೆಳ್ಗದಂ ।
ಪವಿರಳ ಘರ್ಮವಾರಿ ಮೆಱೆವನ್ನಮದೊರ್ವಳೞಲ್ದು ಸುಯ್ಯೆಯುಂ
ಯುವತಿ ಕಡಂಗಿ ಕೋಪರಸದೋಕುಳಿಯಾಡಿದಳಿಕ್ಷುಚಾಪನೊಳ್ ॥ ೪೩

(ಅನಂತನಾಥಪುರಾಣಂ, ೭–೪೨.)

ಬರೆ ತೆಗೆದೊತ್ತೆ ಜೀರ್ಕೊೞವೆಯಿಂ ಪ್ರಿಯನೊತ್ತಿದ ವಾರಿಧಾರೆ [4]ತ
ಳ್ತಿರೆ[4] [5]ಚಳ[5]ಚೂಚುಕಾಗ್ರದೊಳೆೞಲ್ತರೆ ಕರ್ಚಿ ಮೃಣಾಳನಾಳಮಂ ।

---

[1] ದೊ (ಖ.ಬ). [2] ತ್ತಿ (ಖ.ಬ). [3] ಮಲ್ಲ (ಅ) [4] ನೀಳ್ದಿರೆ (ಅ).
[5] ಬರ (ಬಿ).

ಬೆರಸಿದ ಜಕ್ಕವಕ್ಕಿ ಕುಣಿದಾಡುವವೊಲ್ ಕುಚಯುಗ್ಮ[1]ನರ್ತನಂ[1]
ತರಳತರಂಗ[2]ದಂಗಣದೊಳೇ[2]ನೆಸೆದಿರ್ದುದೊ ದೀರ್ಘನೇತ್ರೆಯಾ ॥ ೪೪

(ಲೀಲಾವತಿ, ೧೩–೧೪೬.)

ಬಿರಿವಿನಮೆನ್ನ ಚಿತ್ತಮಿರುಳುಂ ಪಗಲುಂ ಖಳ ನಿನ್ನ ದೂಸಱಿಂ
ಸ್ಮರನಿಸೆ ತಳ್ತು ತಾಗುವಲರಂಬುಗಳೆಯ್ದುವೆ ನೀನದೇಕೆ ನಿ।
ಷ್ಕರು[3]ಣ[3] ಕರಾಬ್ಜಯಂತ್ರಮುಖಮುಕ್ತಸಿತಾಂಬುಗಳಿಂ ಬೆಗಟ್ಟಿನಂ
ಸುರಿವಿನಿಸಿಲ್ಲದೆನ್ನೆರ್ದೆಯನೋವದೆ ನೋಯಿಸುವೈ ಮನಃಪ್ರಿಯಾ ॥ ೪೫

(ಲೀಲಾವತಿ, ೧೩–೧೫೫.)

ಕಿಂಜಲ್ಕಕೆ [4]ಕೆದಱುವಿನಂ
ಕಂಜದಿನುಱಿ[4] ಪೋದುವಂತೆ ಕೆಂದಳದಿಂದಂ।
ನಂಬಿಕೆ ನವರಜ[5]ನೀರಜ[5]
ಮಂಜರಿಯಂ ಪೊಗೆದು ಪೋದಿದಳ್[6] ನೃಪವರನಂ[6] ॥ ೪೬

(ಲೀಲಾವತಿ, ೧೩–೧೫೬.)

ಕತ್ತುರಿನೀರಿಂ ಕರ್ಪಂ
ಪೆತ್ತಂಗಂ ಕುಂಕುಮಾಂಬುವಿಂ ಕಡುಗೆಂಪಂ।
ಪೊತ್ತ ನಿಱಿ ಮೆಱೆಯೆ ತಳಿರಂ
ಸುತ್ತಿದ ವನಚರಿಯನೊರ್ವಳನುಕರಿಸಿರ್ದಳ್ ॥ ೪೭

(ಚಂದ್ರಪ್ರಭಪುರಾಣಂ, ೭–೧೩೪.)

ಘುಸೃಣರಸಂ ಪೊಲ್[7]ಯೆಡೆ[7]ಯಿಂ
ದಸಿಯಳ [8]ಬಾಸೆವಿಡಿದಿಟಿದು[8] ಸೊಗಯಿಸಿದುದು ತೆ।
ಳ್ವಸಿಱ ಪೊಱಗಣ್ಗೆ ಮಿಸುಗುವ
ವಿಸರತ್ತಾಂಬೂಲರಾಗರಸರೇಖೆಯವೊಲ್ ॥ ೪೮

(ಚಂದ್ರಪ್ರಭಪುರಾಣಂ, ೭–೧೩೫.)

ಸರಸಿಜದ ಸಿರಿಯನಾನಪ
ಹರಿ[9]ಸೆಂ[9] ಮುನ್ಮುಖದಿನದುವೆ ನಿಜಮೆಂದು ತನೂ।

---

[1] ಮಂಡಲಂ (ಕ.ಖ.ಬ). [2] ರಂಗದೊಳದೇ (ಅ). [3] ಣ (ಅ). [4] ಮಿಗೆ ಕೆದಱುವ ಕಿಂಜಲ್ಕದೆ (ಅ). [5] ನಿರಜೋ (ಖ.ಬ). [6] ಮಾನದನಂ (ಅ). [7] ಯುಲೆ (ಖ.ಬ). [8] ನಸುಬಾಸೆವಿಡಿದು (ಖ ಬ). [9] ಸಿಯೆ (ಖ.ಬ).

